CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜುಲೈ ೮, ೨೦೦೪ (ಆಷಾಢ ೧೭, ಶಕ ವರ್ಷ ೧೯೨೬) | ಸಂಚಿಕೆ ೨೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಎಂಡಿ:9082:2003-04, ದಿನಾಂಕ: 25ನೇ ಫೆಬ್ರವರಿ 2004**

**ವಾದಿ**

ಪ್ರಧಾನ ವ್ಯವಸ್ಥಾಪಕರು
ಸರ್.ಎಂ. ವಿಶ್ವೇಶ್ವರಯ್ಯ ಕೋ-ಅಪರೇಟಿವ್ ಬ್ಯಾಂಕ್
ನಿಯಮಿತ, ನಂ.109, ಶಂಕರಮಠ ರಸ್ತೆ,
ಶಂಕರಪುರಂ, ಬೆಂಗಳೂರು-560 004.

**ಪ್ರತಿವಾದಿಗಳು**

1. ಶ್ರೀ ಎನ್.ಜಿ. ಉಮೇಶ್,
ಮಾಲೀಕರು, ಆಶ್ರಯ ಮೊಸಾಯಿಕ್ ಟೈಲ್ಸ್
ಅಂಡ್ ಕಾಂಕ್ರೀಟ್ ಬ್ಲಾಕ್ ಇಂಡಸ್ಟ್ರೀಸ್ (ರಿ), ಗಂಗಾ ಫಾರ್ಮ್,
ಕೆಜಿ ಸರ್ಕಲ್ ಹತ್ತಿರ ಎನ್.ಹೆಚ್.4 ಬೈಪಾಸ್ ರಸ್ತೆ ಮತ್ತು
ಎನ್.ಹೆಚ್.48 ಜಂಕ್ಷನ್, ನೆಲಮಂಗಲ,
ಬೆಂಗಳೂರು - 562123.
2. ಶ್ರೀಮತಿ ಕೆ.ಜಿ. ಗಂಗಮ್ಮ ಕೋಂ ಶ್ರೀ ಟಿ. ಗಂಗಯ್ಯ
ನಂ.4, ರಾಯನ್‌ನಗರ, ನೆಲಮಂಗಲ, ಬೆಂಗಳೂರು-562123.
3. ಶ್ರೀಮತಿ ಟಿ.ಗಂಗಯ್ಯ
ನಂ.4, ರಾಯನ್‌ನಗರ, ನೆಲಮಂಗಲ, ಬೆಂಗಳೂರು-562123.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರ ಮತ್ತು ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.22,21,254/- ಗಳನ್ನು ದಿನಾಂಕ 1-12-2003 ರಿಂದ ಶೇಕಡಾ 19 ರಂತೆ ಬಡ್ಡಿ ಮತ್ತು ಶೇ.2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ:ಎಂಡಿ:9082:2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ & ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ

ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರ ಅರ್ಜಿಯಲ್ಲಿ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ; ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್:ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಸ್:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ & ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.22,21,254/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ:22-3-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಕಾಣಿಸಿರುವ ಚರ & ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ ಷೆಡ್ಯೂಲ್ - 1**

ಬೆಂಗಳೂರು ಗ್ರಾಮಾಂತರ ನೆಲಮಂಗಲ ತಾಲ್ಲೂಕಿನ ವಿಶ್ವೇಶ್ವರಪುರ ಗ್ರಾಮ, ಕಸಬಾ ಹೋಬಳಿಯ ಸರ್ವೆ ನಂ.10ರಲ್ಲಿರುವ ಪೂರ್ವದಿಂದ ಪಶ್ಚಿಮಕ್ಕೆ 15 ಅಡಿ, ಉತ್ತರದಿಂದ ದಕ್ಷಿಣಕ್ಕೆ 290 ಅಡಿ ಅಳತೆವುಳ್ಳ 4 ಗುಂಟೆ ಜಮೀನು ಮತ್ತು ಇದರಲ್ಲಿ ಕಟ್ಟಿರುವ ಮನೆ, ಬಾವಿ, ಮರಮಟ್ಟು ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಸರ್ವೆ ನಂ.221/222
ಪಶ್ಚಿಮಕ್ಕೆ : ಸರ್ವೆ ನಂ.10
ಉತ್ತರಕ್ಕೆ : ನ್ಯಾಷನಲ್ ಹೈವೇ ನಂ.48
ದಕ್ಷಿಣಕ್ಕೆ : ಸರ್ವೆ ನಂ.10 ಮತ್ತು 221

**ಷೆಡ್ಯೂಲ್ - 2**

ಬೆಂಗಳೂರು ಗ್ರಾಮಾಂತರ ನೆಲಮಂಗಲ ತಾಲ್ಲೂಕಿನ ಕಸಬಾ ಗ್ರಾಮ, ಕಸಬಾ ಹೋಬಳಿಯ ಸರ್ವೆ ನಂ.221ರಲ್ಲಿರುವ ಕೈಗಾರಿಕಾ ಲ್ಯಾಂಡ್ ಮತ್ತು ಜಿಲ್ಲಾಧಿಕಾರಿಯಿಂದ ಅನುಮತಿ ಪಡೆದು ಕೈಗಾರಿಕಾ ಪ್ರದೇಶವೆಂದು ಪರಿವರ್ತನೆಯಾಗಿರುವ 10 ಗುಂಟೆ ಜಮೀನು ಸೇರಿದಂತೆ ಒಟ್ಟು 4 ಎಕರೆ 25 ಗುಂಟೆ ಜಮೀನು ಚಕ್ಕುಬಂದಿ:

ಪೂರ್ವಕ್ಕೆ : ಪ್ರಸನ್ನ ಆಂಜನೇಯ ಟ್ರಸ್ಟ್‌ಗೆ ಸೇರಿದ ಆಸ್ತಿ
ಪಶ್ಚಿಮಕ್ಕೆ : ಸರ್ವೆ ನಂ.10
ಉತ್ತರಕ್ಕೆ : ಸರ್ವೆ ನಂ.222
ದಕ್ಷಿಣಕ್ಕೆ : ಪ್ರಸನ್ನ ಆಂಜನೇಯ ಟ್ರಸ್ಟ್‌ಗೆ ಸೇರಿದ ಆಸ್ತಿ

**ಷೆಡ್ಯೂಲ್ - 3**

1. 'ಶಕ್ತಿ ಬ್ಲಾಕ್' ಹೈಡೆನ್ಸಿಟಿ ವಿತ್ ಪೇವ್‌ಮೆಂಟ್ ಬ್ಲಾಕ್ ಮೇಕಿಂಗ್ ಮೆಷಿನ್ ಪ್ಯಾನೆಲ್ ಬೋರ್ಡ್ ಒಟ್ಟು 4 ಹೆಚ್.ವಿ. + 3.5 ಹೆಚ್.ಪಿ. + 1 ಹೆಚ್.ಪಿ. : 8.5 ಹೆಚ್.ಪಿ.
2. ಪೇವ್‌ಮೆಂಟ್ ಬ್ಲಾಕ್ ಮೌಲ್ಡ್ ಅಂಡ್ ರಾಮ್ ಈಚ್‌ಡಿಸೈನ್ ಪಿ/ಸ್ಟ್ರೋಕ್ 4 ಬ್ಲಾಕ್ ಆಫ್ 8 ಡಿಫರೆಂಟ್ ಡಿಸೈನ್ಸ್ (ಒಟ್ಟು 8 ಮೌಲ್ಡ್‌ಗಳು).
3. ಭಾರತ್ ಬ್ರಾಂಡ್ ಸೂಪರ್ ಲೆವೆಲಿಂಗ್ ವಿತ್ ರಿಡಕ್ಷನ್ ಗೇರ್ ಬಾಕ್ಸ್ ಕೆ.ಎಮ್.ಟಿ ಕಾಲರ್ ಮಿಕ್ಸಿಂಗ್ ಮೆಷಿನ್ - ಕೆಎಮ್‌ಟಿ.
4. ಕೆ.ಎಮ್.ಟಿ. ಬೆಸ್ಟ್ ಇಂಡಿಯನ್ ಮೇಕ್ ಸಿಂಗಲ್ ಡೈಸ್ ಫ್ಲೋರ್ ಪಾಲಿಷಿಂಗ್ ಮೆಷಿನ್.
5. ಹೈಡ್ರಾಲಿಕ್ ಸೈಸ್
6. ಡಿ.ಜಿ.ಸೆಟ್.

7. ಲಿಟ್ಲ್ ಬ್ಲಾಕ್ ಹೈಡ್ರಾಲಿಕಲಿ ಅಪರೇಟೆಡ್ ಕಾಂಕ್ರೀಟ್ ಬ್ಲಾಕ್ ಮೇಕಿಂಗ್ ಮೆಷಿನ್.
8. ಲಿಟ್ಲ್ ಬ್ಲಾಕ್ ಹ್ಯಾಂಡ್ ಆಪರೇಟೆಡ್ ಕಾಂಕ್ರೀಟ್ ಬ್ಲಾಕ್.
9. ಕಾಂಕ್ರೀಟ್ ಮಿಕ್ಸಿಂಗ್ ಮೆಷಿನ್.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 25-02-2004 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 896 ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ/7941/2003-04, ದಿನಾಂಕ: 25ನೇ ಫೆಬ್ರವರಿ 2004**

**ವಾದಿ**

ಪ್ರಧಾನ ವ್ಯವಸ್ಥಾಪಕರು
ಸರ್.ಎಂ. ವಿಶ್ವೇಶ್ವರಯ್ಯ ಕೋ-ಅಪರೇಟಿವ್ ಬ್ಯಾಂಕ್ ನಿಯಮಿತ,
ನಂ.109, ಶಂಕರಮಠ ರಸ್ತೆ,
ಶಂಕರಪುರಂ, ಬೆಂಗಳೂರು-560 004.

**ಪ್ರತಿವಾದಿಗಳು**

1. ಶ್ರೀ ವಿ. ಚಂದ್ರಶೇಖರಾಚಾರಿ ಬಿನ್ ಎನ್. ವೆಂಕಟರಮಣಾಚಾರಿ.
2. ಶ್ರೀಮತಿ ವಿ. ವಸಂತ ಕೋಂ ವಿ. ಚಂದ್ರಶೇಖರಾಚಾರಿ ವಾಸ: ನಂ.5, 1ನೇ ಮುಖ್ಯರಸ್ತೆ ನಾಗರಬಾವಿ, ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು-560 072.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.17,62,299/- ಗಳನ್ನು ದಿನಾಂಕ 1-1-2004 ರಿಂದ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ.ಜೆಆರ್‌ಬಿ/ಡಿಸ್/7941/2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ; ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್:ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಸ್:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.17,62,299/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ:22-3-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ನಾಗರ ಬಾವಿ ಗ್ರಾಮದ ಅಸೆಸ್‌ಮೆಂಟ್ ನಂ.42, ಖಾತಾ ನಂ.2964/3333 ಈ ಸಂಖ್ಯೆಯ ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ, ಉತ್ತರದಿಂದ ದಕ್ಷಿಣಕ್ಕೆ 30 ಅಡಿ ಅಳತೆಯ ಆಸ್ತಿ ಸಂಖ್ಯೆ:5(ಹಳೇ ನಂ.6) ಇದರಲ್ಲಿ ಕಟ್ಟಲಾಗಿರುವ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಆಸ್ತಿ ಸಂಖ್ಯೆ 5
ಪಶ್ಚಿಮಕ್ಕೆ : ಆಸ್ತಿ ಸಂಖ್ಯೆ 6
ಉತ್ತರಕ್ಕೆ : ಶ್ರೀ ಲಕ್ಕಪ್ಪನವರಿಗೆ ಸೇರಿದ ಆಸ್ತಿ
ದಕ್ಷಿಣಕ್ಕೆ : ರಸ್ತೆ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 25-02-2004 ರಂದು ನೀಡಿರುತ್ತೇನೆ.

**ಬಸವೇಗೌಡ**
ಪಿ.ಆರ್. 897 ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಚಿತ್ರದುರ್ಗ ಇವರ ನ್ಯಾಯಾಲಯದಲ್ಲಿ**
**ಅಧಿಭಾರ ಅರ್ಜಿ ಸಂಖ್ಯೆ 1/2004-05, ದಿನಾಂಕ: 28ನೇ ಮೇ 2004**

| | | |
|---|---|---|
| **ಅರ್ಜಿದಾರರು** | **ವಿರುದ್ಧ** | **ಎದುರು ಅರ್ಜಿದಾರರು** |
| ವ್ಯವಸ್ಥಾಪಕರು | | ಶ್ರೀ ಕೆ. ರಾಮಲಿಂಗಪ್ಪ |
| ವ್ಯ.ಸೇ.ಸ. ಬ್ಯಾಂಕ್ (ನಿ.) ಭೀಮಸಮುದ್ರ, | | ಮಾಜಿ ವ್ಯವಸ್ಥಾಪಕರು, ವ್ಯಸೇ.ಸ.ಬ್ಯಾಂಕ್ (ನಿ,) |
| ಚಿತ್ರದುರ್ಗ ತಾ|| | | ಭೀಮಸಮುದ್ರ ವಾಸ-ಮಾನಂಗಿ, ಚಿತ್ರದುರ್ಗ ತಾ|| |

**ಸಹಕಾರ ಸಂಘಗಳ ಕಾಯ್ದೆ 1957ರ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಸ್ಥಿರಾಸ್ತಿಗಳ ಜಪ್ತಿ ನೋಟೀಸು**

ಅರ್ಜಿದಾರರ ಬ್ಯಾಂಕಿನವರು ಎದುರು ಅರ್ಜಿದಾರರ ವಿರುದ್ಧ ಸಹಕಾರ ಸಂಘಗಳ ಕಾಯ್ದೆ ಕಲಂ 69ರ ಅಡಿಯಲ್ಲಿ ದುರುಪಯೋಗದ ಹಣ ರೂ. 10,40,000.00 ರೂಪಾಯಿಗಳ ವಸೂಲಾತಿಗಾಗಿ ಅಧಿಭಾರ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಹೂಡಿರುತ್ತಾರೆ. ಅಧಿಭಾರ ಅರ್ಜಿ ಸಂಖ್ಯೆ 01/2004-05 ಆಗಿರುತ್ತದೆ.

ಪುನಃ ಅರ್ಜಿದಾರರು ಅಧಿಭಾರ ಅರ್ಜಿಯು ತೀರ್ಮಾನವಾಗುವ ಒಳಗಾಗಿ, ಎದುರು ಅರ್ಜಿದಾರರು ಮತ್ತು ಅವರ ಧರ್ಮಪತ್ನಿಯವರ ಕೆಳಗೆ ತೋರಿಸಿರುವ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಪರಭಾರೆ ಅಥವಾ ಮಾರಾಟ ಮಾಡುವ ಸಂಭವವಿರುತ್ತದೆ ಎಂದು ತಿಳಿಸಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಸ್ಥಿರಾಸ್ತಿಗಳ ಜಪ್ತಿ ಆದೇಶವನ್ನು ನೀಡಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರು ಮುಂದುವರಿಯುತ್ತ ಎದುರು ಅರ್ಜಿದಾರರ ತೀರ್ಪು ಸ್ಥಿರಾಸ್ತಿಗಳ ಜಪ್ತಿ ಆದೇಶ ನೀಡದಿದ್ದಲ್ಲಿ ಒಂದು ವೇಳೆ ಸದರಿ ಆಸ್ತಿಗಳನ್ನು ಪರಭಾರೆ ಮಾಡಿದಲ್ಲಿ ಅರ್ಜಿದಾರರ ಬ್ಯಾಂಕಿಗೆ ದುರುಪಯೋಗದ ಹಣ ವಸೂಲಿ ಮಾಡಿಕೊಳ್ಳಲು ಯಾವುದೇ ರಹಾ ಇರುವುದಿಲ್ಲವೆಂದು ತಮ್ಮ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಮೇಲೆ ತಿಳಿಸಿದ ಅಂಶಗಳನ್ನು ಅವಲೋಕಿಸಿದಾಗ ಒಂದು ವೇಳೆ ಎದುರು ಅರ್ಜಿದಾರರು ತಮ್ಮ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಪರಭಾರೆ ಅಥವಾ ಮಾರಾಟ ಮಾಡಿದ್ದಲ್ಲಿ ಈ ನ್ಯಾಯಾಲಯದಿಂದ ವಸೂಲಾತಿಗೆ ಅವಾರ್ಡ್ ನೀಡಿ ಅಮಲ್ಜಾರಿ ಕ್ರಮ ಕೈಗೊಂಡಾಗ್ಯೂ ಪ್ರಯೋಜನವಿರುವುದಿಲ್ಲವೆಂದು ಭಾವಿಸಿ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬಿ.ಟಿ. ಜಯರಾಮಪ್ಪ, ಸ.ಸಂ.ಸ. ನಿಬಂಧಕರು, ಚಿತ್ರದುರ್ಗ ಉಪವಿಭಾಗ ಚಿತ್ರದುರ್ಗ ಆದ ನಾನು ಸ.ಸಂ.ಗಳ ಕಾಯ್ದೆ 1959ರ ಕಲಂ 103ರ ಅಡಿಯಲ್ಲಿ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಕ್ರಯಾ ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿ: 21-11-2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎದುರು ಅರ್ಜಿದಾರರ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಈ ಅಧಿಭಾರ ಅರ್ಜಿಯ ತೀರ್ಪು ಪೂರ್ವ ಷರತ್ತಿನ ಜಪ್ತಿ ಆದೇಶವನ್ನು ನೀಡಿರುತ್ತೇನೆ.

ಎದುರು ಅರ್ಜಿದಾರರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಒಂದು ವೇಳೆ ನೀವು ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ತಡೆಹಿಡಿಯಬೇಕೆಂದು ಭಾವಿಸಿದ್ದಲ್ಲಿ ದಿನಾಂಕ:17-04-2004ರ ಒಳಗಾಗಿ ತಪ್ಪದಂತೆ ನಗದು ಭದ್ರತೆ ರೂ.10,40,000.00 ಗಳನ್ನು ಅರ್ಜಿದಾರರ ಬ್ಯಾಂಕಿನಲ್ಲಿ ಸ.ಸಂ.ಸ.ನಿ. ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಅಮಾನತ್ತು ಖಾತೆಯಲ್ಲಿ ಠೇವಣಿ ಮಾಡಿ ಅಧಿಕೃತ ಚಲನ್ ಅಥವಾ ರಶೀದಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ತಪ್ಪಿದ್ದಲ್ಲಿ ಈಗ ನೀಡಿರುವ ಷರತ್ತಿನ ಸ್ಥಿರಾಸ್ತಿಗಳ ಜಪ್ತಿ ಆದೇಶವು ಸ್ಥಿರೀಕರಣಗೊಂಡಿದೆ ಎಂದು ಭಾವಿಸತಕ್ಕದ್ದು.

ಮೇಲ್ಕಂಡ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಕೊಳ್ಳುವವರಿಗೆ ಈ ಜಪ್ತಿ ಆದೇಶದ ಷರತ್ತಿಗೆ ಒಳಪಟ್ಟಿದೆ ಎಂದು ತಿಳುವಳಿಕೆ ನೀಡಲಾಗಿದೆ.

ಈ ಆದೇಶವನ್ನು ದಿನಾಂಕ 28-5-04ರಂದು ನನ್ನ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಲಾಗಿದೆ.

**ಷೆಡ್ಯೂಲ್ ಸ್ಥಿರಾಸ್ತಿಗಳು**

1) ಚಿತ್ರದುರ್ಗ ತಾಲ್ಲೂಕು ಕಸಬಾ ಹೋಬಳಿ ಕಾಟೀಹಳ್ಳಿ ಗ್ರಾಮದ ರಿ.ಸರ್ವೆ ನಂ.25ರಲ್ಲಿ 2 ಎಕರೆ ಖುಷ್ಕಿ ಜಮೀನು ಖಾತೆ ನಂ. 135 ಇದರ ಚಕ್ಕುಬಂದಿ ಪೂರ್ವಕ್ಕೆ : ಪರಮೇಶ್ವರಪ್ಪ ಬಿನ್ ಮುರಿಗೆಪ್ಪ, ರಿ.ಸರ್ವೆ ನಂ. 24/1ಪಿ2, ಪಶ್ಚಿಮಕ್ಕೆ : ಬಸವರಾಜಪ್ಪ ಬಿನ್ ದಾನಪ್ಪ ರಿ.ಸರ್ವೆ ನಂ.25/1ಪಿ3, ಉತ್ತರಕ್ಕೆ ದಾನಪ್ಪ ಬಿನ್ ತೊಟ್ಟಿ ಬಸಪ್ಪ ರಿ.ಸರ್ವೆ ನಂ. 25/1ಪಿ1, ದಕ್ಷಿಣಕ್ಕೆ ಮಾನಂಗಿ ಗಡಿ.

2) ರತ್ನಮ್ಮ ಕೋಂ ಕೆ. ರಾಮಲಿಂಗಪ್ಪ ಮಾನಂಗಿ ಇವರ ಹೆಸರಿನ ಮಾನಂಗಿ ಗ್ರಾಮದ ರಿ.ಸರ್ವೆ ನಂ. 86/4ಎ ಮತ್ತು 1.06 ಕುಂಟೆ, ರಿ.ಸರ್ವೆ ನಂ.85/4ಎ 0.31 ಗುಂಟೆ 86/5ಎ 0.14 ಗುಂಟೆ ರಿ.ಸರ್ವೆ ನಂ. 110/1ಎ3 0.30 ಗುಂಟೆ, ಜಮೀನಿಗೆ ಚಕ್ಕುಬಂದಿ ಪೂರ್ವಕ್ಕೆ : ಪರಮೇಶ್ವರಪ್ಪನವರ ಮನೆ, ಪಶ್ಚಿಮಕ್ಕೆ : ಹೊಸಹಳ್ಳಿಗೆ ಹೋಗುವ ರಸ್ತೆ, ಉತ್ತರಕ್ಕೆ ಕರಿಯಪ್ಪನ ಮಗ ಮಲ್ಲಿಕಾರ್ಜುನಪ್ಪನ ಜಮೀನು, ದಕ್ಷಿಣಕ್ಕೆ : ಹೈಸ್ಕೂಲ್ ಮತ್ತು ಊರಿನ ಕುಡಿಯುವ ಟ್ಯಾಂಕ್ ಶ್ರೀಮತಿ ಎಂ. ರತ್ನಮ್ಮ ಕೋಂ ಕೆ. ರಾಮಲಿಂಗಪ್ಪ ಇವರ ಮನೆ 30 x 40 ಸಿಮೆಂಟ್ ಶೀಟ್‌ನ ಮನೆ, ಚಕ್ಕುಬಂದಿ ಪೂರ್ವಕ್ಕೆ : ತಿಮ್ಮಪ್ಪನ ಮನೆ, ಪಶ್ಚಿಮಕ್ಕೆ : ಓವರ್‌ಟ್ಯಾಂಕ್, ಉತ್ತರಕ್ಕೆ : ಖಾಲಿಜಾಗ, ದಕ್ಷಿಣಕ್ಕೆ : ಸಿದ್ದಪ್ಪನ ಮನೆ.

ಪಿ.ಆರ್. 898 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ.

**ಅಧಿಕಾರಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಸಖರಾಯಪಟ್ಟಣ ಪೋ.ರಾ.ಕ್ರೈಂ ಸಂ. 115/2002 ದಿನಾಂಕ: 16ನೇ ಆಗಸ್ಟ್ 2002**

**ಅಬಕಾರಿ ಉಪನಿರೀಕ್ಷಕರು, ಕಡೂರು ಉಪ ವಲಯ ಇವರ ಪ್ರ. ವ. ವ. ಸಂಖ್ಯೆ. 57/2002-03**

**ದಿನಾಂಕ: 27ನೇ ಆಗಸ್ಟ್ 2002**

**ಉಪಸ್ಥಿತರು** : ಶ್ರೀ ಪಿ. ಹನುಮೇಗೌಡ
ಅಧಿಕಾರಯುತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಫಿರ್ಯಾದುದಾರರು** : 1. ಆರಕ್ಷಕ ಉಪ ನಿರೀಕ್ಷಕರು ಸಖರಾಯಪಟ್ಟಣ ಪೊಲೀಸ್ ಠಾಣೆ

**ಆಪಾದಿತರು** : ನಾಣೆಯಪ್ಪ ಬಿನ್ ಕೊರಗಪ್ಪ

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 16.8.2002ರಂದು ಆರಕ್ಷಕ ಉಪ ನಿರೀಕ್ಷಕರು, ಸಖರಾಯಪಟ್ಟಣ ಪೊಲೀಸ್ ಠಾಣೆ ಇವರು ಯಮಹಾ ಬೈಕ್ ಸಂಖ್ಯೆ. ಸಿ.ಕೆ.ಎನ್. 7485 ಅನ್ನು ಅಕ್ರಮ ಸಾರಾಯಿ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ 100 ಮಿಲಿಯ 350 ಸಾರಾಯಿ ಸ್ಯಾಚೆಟ್‌ಗಳಿದ್ದು, ಒಟ್ಟು 35,000 ಲೀ. ಸಾರಾಯಿ ಇದ್ದು, ಸದರಿ ಸಾರಾಯಿಯು ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ನಾಣೆಯಪ್ಪ ಬಿನ್ ಕೊರಗಪ್ಪ ಇವರು ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಸಾರಾಯಿಯನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಕ್ರೈಂ. ಸಂ. 115/2002ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಕಡೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ. ವ. ವ. 57/2002-03, ದಿನಾಂಕ 27-8-2002ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಸಾರಾಯಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಯಶವಂತಪುರ, ಬೆಂಗಳೂರು (ಉತ್ತರ), ಹಾಗೂ ಮೌಲ್ಯ ದೃಢೀಕರಣ ಕೋರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರುಗಳಿಗೆ ಪ್ರಕರಣ ದಾಖಲಾದನಿಂದಲೂ ಈವರೆವಿಗೂ ಪತ್ರಗಳನ್ನು ಬರೆದಿದ್ದು, ಸದರಿಯವರಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ಹಕ್ಕು ಸಾಧಿಸಲು ದಿನಾಂಕ:9.1.2004ರಂದು ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ 30 ದಿನಗಳ ಗಡುವು ನೀಡಿ ವಾಹನದ ಮೇಲೆ ಹಕ್ಕು ಸಾಧಿಸಲು ಸಂಬಂಧಪಟ್ಟ ಅಧಿಕೃತ ದಾಖಲಾತಿಯೊಂದಿಗೆ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಲು ಅಂತಿಮ ಕಾಲಾವಕಾಶ ನೀಡಿ, ಸದರಿ ಅವಧಿಯೊಳಗೆ ಯಾವುದೇ ಮನವಿ ಬಾರದೇ ಇದ್ದಲ್ಲಿ ಏಕ ಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. 30 ದಿನಗಳು ಕಳೆದರೂ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಆರೋಪಿಯಾಗಿರುವ ಶ್ರೀ ನಾಣೆಯಪ್ಪ ಬಿನ್ ಕೊರಗಪ್ಪ, ಬಾಣಾವರ ಪೇಟೆ, ಅರಸೀಕೆರೆ ತಾ., ಹಾಸನ ಜಿಲ್ಲೆ, ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ ಕಲಂ. 43(ಬಿ) ಅಡಿಯಲ್ಲಿ ನೋಟೀಸ್ ನೊಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ಸ್ವೀಕೃತಿಯೊಂದಿಗೆ ದಿನಾಂಕ:24.3.2004 ರಂದು ಈ ಪ್ರಾಧಿಕಾರಕ್ಕೆ ಮರಳಿ ಬಂದಿದ್ದು, ಸದರಿಯವರಿಂದ ಈವರೆವಿಗೂ ಯಾವುದೇ ಸಮಜಾಯಿಷಿ ಬಂದಿರುವುದಿಲ್ಲ.

ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ, ಸದರಿ ಮೊಕದ್ದಮೆಯು ದಾಖಲಾಗಿ ಸುಮಾರು ಒಂದು ವರ್ಷ, ಹತ್ತು ತಿಂಗಳಿಗೂ ಮೇಲ್ಪಟ್ಟಿದ್ದು, ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ

ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ಬಂದು ಯಾರು ಕೂಡ ಹಕ್ಕು ಸಾಧಿಸದೇ ಇರುವುದರಿಂದ ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಂದ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ ಮತ್ತು ಸರ್ಕಾರೀ ಆದಾಯದ ಹಿತ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ. 43 (ಸಿ) ಅಡಿಯಲ್ಲಿ ವಾಹನವನ್ನು ಹಾಗೂ 35.000 ಲೀಟರ್ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಡಿ.ಟಿ.ಸಿ.ಆರ್. ಸಂಖ್ಯೆ 368/2002-03, ದಿನಾಂಕ:10ನೇ ಜೂನ್ 2004**

ಶ್ರೀ ಪಿ. ಹನುಮೇಗೌಡ, ಅಧಿಕಾರಯುತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ. ಸಿಕೆಎಸ್. 7485 (ಯಮಹಾ ಬೈಕ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ವಶಪಡಿಸಿಕೊಂಡ 35.000 ಲೀಟರ್ ಸಾರಾಯಿಯಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 34.900 ಲೀಟರ್ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದೆ. ರಾಸಾಯನಿಕ ತಜ್ಞರ ವರದಿ ಪಡೆದು ಸಾರಾಯಿಯು ಮಾನವನ ಸೇವನೆಗೆ ಯೋಗ್ಯವೆಂದು ದೃಢಪಟ್ಟಲ್ಲಿ ಮಾತ್ರ ವರದಿ ಬಂದ ನಂತರ ಕಾನೂನು ರೀತ್ಯಾ ವಿಲೇ ಮಾಡಲು ಪ್ರತ್ಯೇಕ ಆದೇಶ ನೀಡಲಾಗುವುದು.

ಈ ಆದೇಶವನ್ನು ಇಂದು ಅಂದರೆ 10ನೇ ಜೂನ್ 2004ರಂದು ಬೆರಳಚ್ಚುಗಾರರಿಗೆ ಉಖ್ತಲೇಖನಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 899

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಅಬಕಾರಿ ನಿರೀಕ್ಷಕರು, ಮೂಡಿಗೆರೆ ಉಪ ವಿಭಾಗ ಇವರ ಪ್ರವವ ಸಂಖ್ಯೆ. 5/2003-04, ದಿನಾಂಕ: 11ನೇ ಸೆಪ್ಟೆಂಬರ್ 2003**

**ಉಪಸ್ಥಿತರು** : ಶ್ರೀ ಕೆ. ಭೀಮಪ್ಪ
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ),
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದುದಾರರು** : ಅಬಕಾರಿ ನಿರೀಕ್ಷಕರು ಮೂಡಿಗೆರೆ ಉಪ ವಿಭಾಗ

**ಆಪಾದಿತರು** : ಹೆಚ್.ವಿ. ಕುಮಾರೇಗೌಡ ಯಾನೆ ಕುಮಾರ್ ಕಂಠೀರವ ಬಿನ್ ವೆಂಕಟೇಗೌಡ

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 11.9.2003 ರಂದು ಅಬಕಾರಿ ನಿರೀಕ್ಷಕರು, ಮೂಡಿಗೆರೆ ಉಪ ವಿಭಾಗ, ಮೂಡಿಗೆರೆ ಇವರು ವಾಹನ ಸಂಖ್ಯೆ: ಸಿ ಎನ್ ಯು.5675 ಯಜ್ಡಿ ಮೋಟಾರು ಸೈಕಲ್‌ನಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ಮೂಡಿಗೆರೆ ತಾಲ್ಲೂಕು, ಗೋಣಿಬೀಡು ಹೋಬಳಿ, ಜೇನುಬೈಲು ಬಸ್ ನಿಲ್ದಾಣದ ಹತ್ತಿರ ತಡೆದು ನಿಲ್ಲಿಸಿ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 22.600 ಲೀಟರ್ ಸಾರಾಯಿದ್ದು, ಸದರಿ ಸಾರಾಯಿ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಹೆಚ್.ವಿ. ಕುಮಾರೇಗೌಡ ಯಾನೆ ಕುಮಾರ ಕಂಠೀರವ ಬಿನ್ ವೆಂಕಟೇಗೌಡ ಇವರು ಸಂಬಂಧಪಟ್ಟ ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳನ್ನಾಗಲೀ ಹಾಜರುಪಡಿಸದೇ ಇದ್ದುದರಿಂದ, ಸದರಿ ಸಾರಾಯಿ ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿ ನಂತರ ಜಾಮೀನಿನ ಮೇಲೆ ಬಿಡುಗಡೆ ಮಾಡಿ ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಸಾರಾಯಿಯನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಪ್ರ.ವ.ವ. ಸಂಖ್ಯೆ. 5/2003-04ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಮುಂದಿನ ತನಿಖೆಗಾಗಿ ಅಬಕಾರಿ ಮೂಡಿಗೆರೆ ನಿರೀಕ್ಷಕರು, ಮೂಡಿಗೆರೆ ಉಪ ವಲಯ ಇವರಿಗೆ ಹಸ್ತಾಂತರಿಸಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸಾರಾಯಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರಿಂದ ಪಡೆಯಲಾದ ವಾಹನದ "ಬಿ"ಎಕ್ಸ್ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಬಿ.ಎಲ್. ಸಂಪತ್ ಬಿನ್ ಬಿ.ಎಂ. ಲಿಂಗಪ್ಪಗೌಡ, ಕಾಫಿ ಪ್ಲಾಂಟರ್,, ಬಾಳೂರು ಅಂಚೆ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ

ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು, ಇವರು ವಾಹನಕ್ಕೆ ರೂ.1,550/- (ಒಂದು ಸಾವಿರದ ಐದು ನೂರ ಐವತ್ತು ರೂಪಾಯಿಗಳು ಮಾತ್ರ)ಗಳ ಬೆಲೆಯನ್ನು ನಿಗದಿಪಡಿಸಿ ವರದಿಯನ್ನು ನೀಡಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ಬಿ.ಎಲ್. ಸಂಪತ್ ಬಿನ್ ಬಿ.ಎಂ. ಲಿಂಗಪ್ಪಗೌಡ, ಕಾಫಿ ಪ್ಲಾಂಟರ್, ಬಾಳೂರು ಅಂಚೆ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರಿಗೆ ಕಲಂ. 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ದಿನಾಂಕ: 4.11.2003ರಂದು ಸ್ವೀಕೃತಿಯೊಂದಿಗೆ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ವಾಹನದ ಮಾಲೀಕರಿಗೆ ನೋಟೀಸ್ ಜಾರಿಯಾಗಿದ್ದರೂ, ಈವರೆವಿಗೂ ಸಹಾ ಪ್ರಾಧಿಕಾರದ ಮುಂದೆ ಬಂದು ಲಿಖಿತ ಸಮಜಾಯಿಷಿ ಸಲ್ಲಿಸಿರುವುದಿಲ್ಲ. ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನ ಮತ್ತು 22.600 ಲೀಟರ್ ಸಾರಾಯಿ ಅನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಡಿ.ಟಿ.ಸಿ.ಆರ್. ಸಂಖ್ಯೆ. 128/2003-04, ದಿನಾಂಕ: 15ನೇ ಜೂನ್ 2004**

ಶ್ರೀ ಕೆ. ಭೀಮಪ್ಪ, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ. ಸಿ ಎನ್ ಯು.5675 (ಯಜ್ಡಿ ಮೋಟಾರ್ ಸೈಕಲ್) ಮತ್ತು 22.600 ಲೀಟರ್ ಸಾರಾಯಿಯ ಪೈಕಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 22.300 ಲೀಟರ್ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ರಾಸಾಯನಿಕ ತಜ್ಞರ ವರದಿ ಪಡೆದ ನಂತರ ಮಾನವನ ಸೇವನೆಗೆ ಯೋಗ್ಯವೆಂದು ದೃಢಪಟ್ಟಲ್ಲಿ ಮಾತ್ರ ಅಬಕಾರಿ ನಿರೀಕ್ಷಕರು, ಮೂಡಿಗೆರೆ ವಲಯ ಇವರಿಗೆ ಕಾನೂನು ರೀತ್ಯಾ ವಿಲೇವಾರಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ 15ನೇ ಜೂನ್ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿಮುಕ್ತನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್,

ಪಿ.ಆರ್. 900 ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ**

**ಇವರ ನ್ಯಾಯಾಲಯದಲ್ಲಿ**

| | | |
|---|---|---|
| **ಉಪಸ್ಥಿತರು** | : | ಶ್ರೀ ಮಹಮದ್ ಇಲಿಯಾಸ್ ಅಹಮದ್<br>ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,<br>ಕೊಡಗು ಜಿಲ್ಲೆ, ಮಡಿಕೇರಿ. |
| **ಫಿರ್ಯಾದುದಾರರು** | : | ವಿರಾಜಪೇಟೆ ಸಂಚಾರಿ ಅಬಕಾರಿ<br>ದಳದ ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ. |
| **ಆಪಾದಿತರು** | : | ತೀತಿಮಾಡ ಪಿ ಸುಬ್ಬಯ್ಯ,<br>ಆಲಿಯಾಸ್ ಕಿಟ್ಟು, ವಿ.ಬಾಡಗ ಕುಟ್ಟಂದಿ ಅಂಚೆ, ವಿರಾಜಪೇಟೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 26-3-2004 ರಂದು ವಿರಾಜಪೇಟೆ ಸಂಚಾರಿದಳದ ಅಬಕಾರಿ ಉಪ ನಿರೀಕ್ಷಕರು ಕರ್ತವ್ಯದಲ್ಲಿದ್ದಾಗ ದೊರೆತ ಖಚಿತ ವರ್ತಮಾನದ ಮೇರೆಗೆ ಗೋಣಿಕೊಪ್ಪದಿಂದ ವಿರಾಜಪೇಟೆ ಕಡೆಗೆ ಬರುತ್ತಿದ್ದ ಜೀಪು ನಂ: MM.540 ನಂ: KA-12-M-7357ನ್ನು ಸಂಶಯದ ಮೇರೆಗೆ ತಪಾಸಣೆ ಮಾಡಿದಾಗ ಜೀಪಿನಲ್ಲಿ ಒಬ್ಬನಿದ್ದು ಆತನನ್ನು ಕೆಳಗೆ ಇಳಿಸಿ ಆತನಿಗೆ ಜೀಪನ್ನು ತಪಾಸಣೆ ಮಾಡುವುದಾಗಿ ತಿಳಿಸಿ ಸ್ಥಳದಲ್ಲಿ ಸರ್ಚ್ ಮೆಮೋ ಬರೆದು ಜೀಪನ್ನು ತಪಾಸಣೆ ನಡೆಸಿದಾಗ ಜೀಪಿನ ಹಿಂಬದಿಯಲ್ಲಿ ಮೂರು ಪ್ಲಾಸ್ಟಿಕ್ ಚೀಲಗಳಿದ್ದು ಅದರಲ್ಲಿ 100 ML ನ 800 ಸಾರಾಯಿ ಪ್ಯಾಕೇಟುಗಳಿದ್ದು ಅವುಗಳನ್ನು ಜೀಪಿನಲ್ಲಿ ಸಾಗಾಣಿಕೆ ಮಾಡಲು ರಹದಾರಿ ಪತ್ರ ವಗೈರೆ ಕೇಳಲಾಗಿ ಯಾವುದೂ ಇಲ್ಲವೆಂದು ತಿಳಿಸಿದ ಮೇರೆಗೆ ಮೇಲ್ಕಂಡ ಸಾರಾಯಿ ಪ್ಯಾಕೇಟುಗಳನ್ನು ವಶಪಡಿಸಿಕೊಂಡು ಜೀಪಿನ ಚಾಲಕ ತೀತಿಮಾಡ ಪಿ. ಸುಬ್ಬಯ್ಯ ಆಲಿಯಾಸ್ ಕಿಟ್ಟು, ತಂದೆ ಪೌತಿ ಪೊನ್ನಪ್ಪ, ವಿ ಬಾಡಗ ಗ್ರಾಮ, ಕುಟ್ಟಂದಿ ಅಂಚೆ, ವಿರಾಜಪೇಟೆ ತಾಲ್ಲೂಕು ಇವರ ಮೇಲೆ ವಿರಾಜಪೇಟೆ ಸಂಚಾರಿ ದಳದ ಅಬಕಾರಿ ಉಪ ನಿರೀಕ್ಷಕರು, ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ 1965ರ ಕಲಂ. 11/R/W.14, 34, 38 ರ ಪ್ರಕಾರ ಪ್ರಥಮ ವರ್ತಮಾನ ವರದಿ ಸಂ: 15/2003-04 ದಿನಾಂಕ: 26-3-04 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು

ಆರೋಪಿಯನ್ನು ದಸ್ತಗಿರಿ ಮಾಡಿ ಜೀಪು ಮತ್ತು ಸಾರಾಯಿ ಪ್ಯಾಕೇಟುಗಳನ್ನು ವಶಪಡಿಸಿಕೊಂಡಿರುತ್ತಾರೆ. ಹಾಗೂ ವಿರಾಜಪೇಟೆ ಉಪ ವಲಯದ ಉಪ ನಿರೀಕ್ಷಕರಿಗೆ ಮುಂದಿನ ಕ್ರಮಕ್ಕಾಗಿ ಹಸ್ತಾಂತರಿಸಿರುತ್ತಾರೆ. ಅದರಂತೆ ವಿರಾಜಪೇಟೆಯ ಉಪ ವಲಯ ಉಪ ನಿರೀಕ್ಷಕರು ಈ ಪ್ರಕರಣದಲ್ಲಿ ಸ್ವಾಧೀನಪಡಿಸಿಕೊಂಡ ವಸ್ತುಗಳನ್ನು ವಶಕ್ಕೆ ತೆಗೆದುಕೊಂಡು ಪ್ರಕರಣದ ದಾಖಲಾತಿಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ರ ಪ್ರಕಾರ ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿನ ಕಡತವನ್ನು ಈ ಪ್ರಾಧಿಕಾರ ಕೂಲಂಕುಷವಾಗಿ ಪರಿಶೀಲಿಸಿದಾಗ ವಾಹನದ ಮಾಲೀಕರು ಅವರಿಗೆ ತಿಳಿದೇ ಸದರಿ ವಾಹನವನ್ನು ಅಕ್ರಮ ಸಾರಾಯಿ ಪ್ಯಾಕೇಟುಗಳ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಕಂಡು ಬಂದ ಕಾರಣ ಸದರಿ ವಾಹನವನ್ನು 100 ML ನ 800 ಸಾರಾಯಿ ಪ್ಯಾಕೇಟುಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 ರ ಪ್ರಕಾರ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಹೇಳಿಕೆ ನೋಟೀಸನ್ನು ದಿನಾಂಕ 4-5-2004 ರಂದು ಜಾರಿ ಮಾಡಿ ಏಳು ದಿನಗಳೊಳಗಾಗಿ ಸೂಕ್ತ ಸಮಜಾಯಿಸಿಕೆಯನ್ನು ಸಲ್ಲಿಸುವಂತೆ ಮಾಲೀಕರಿಗೆ ನೋಟೀಸ್ ನೀಡಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸ್‌ನ ಬಗ್ಗೆ ಶ್ರೀ ಟಿ.ಪಿ. ದೇವಯ್ಯ S/O ಟಿ.ಸಿ. ಪೊನ್ನಪ್ಪ, ವಿ.ಬಾಗಡ ಗ್ರಾಮ, ಕುಟ್ಟಂದಿ ಅಂಚೆ, ವಿರಾಜಪೇಟೆ ತಾಲ್ಲೂಕು ಇವರು ಲಿಖಿತ ಅರ್ಜಿಯನ್ನು ಸಲ್ಲಿಸಿ ತಾನು ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಜೀಪು MM.540 ನಂ: KA-12-M-7357 ರ ಅಧಿಕೃತ ಮಾಲೀಕರಾಗಿದ್ದು ತನ್ನ ವಾಹನವನ್ನು ಚಾಲಕನು ನನಗೆ ತಿಳಿಯದಂತೆ ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡಿದ್ದು ಅಬಕಾರಿ ಕಾಯ್ದೆಯನ್ನು ಉಲ್ಲಂಘನೆ ಮಾಡಿರುತ್ತಾನೆ. ಈ ಕಾರಣದಿಂದ ಸದರಿ ವಾಹನವನ್ನು ಇಲಾಖಾ ಅಧಿಕಾರಿಗಳು ಸ್ವಾಧೀನಪಡಿಸಿಕೊಂಡು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ರವರ ಘನ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಆದುದರಿಂದ ಈಗ ನನ್ನ ಆರ್ಥಿಕ ಸ್ಥಿತಿ ಸರಿಯಿಲ್ಲದ ಕಾರಣ ವಕೀಲರನ್ನು ನೇಮಿಸಿ ಮೊಕದ್ದಮೆಯನ್ನು ನಡೆಸಿಕೊಂಡು ಹೋಗಲು ಶಕ್ತನಲ್ಲ. ಆದ ಕಾರಣ ಈ ಅಪರಾಧವನ್ನು ಮನ್ನಿಸಿ ಸದರಿ ವಾಹನವನ್ನು ತಾವು ಇಲಾಖೆ ಮೂಲಕ ಕಾನೂನು ರೀತಿ ವಿಲೇ ಮಾಡಲು ನನ್ನ ಅಭ್ಯಂತರವಿಲ್ಲ ಹಾಗೂ ಈ ಪ್ರಾಧಿಕಾರ ನೀಡುವ ಆದೇಶಕ್ಕೆ ಬದ್ಧನಾಗಿರುತ್ತೇನೆ ಎಂದು ಲಿಖಿತದ ಮೂಲಕ ವಿನಂತಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾರಾಯಿ ಪ್ಯಾಕೇಟಿನಿಂದ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ರಾಸಾಯನಿಕ ತಜ್ಞರಲ್ಲಿಗೆ ಕಳಿಸಲಾಗಿದ್ದು ಸದರಿ ದ್ರವವು ಸಾರಾಯಿ ಎಂದು ದೃಢೀಕರಿಸಿರುವುದರಿಂದ ಹಾಗೂ ಸಾರಾಯಿ ಎಂದು ಸಾಬೀತಾಗಿರುವುದರಿಂದ ಸದರಿ ವಾಹನವನ್ನು ಅಬಕಾರಿ ಕಾಯ್ದೆಗೆ ವಿರೋಧವಾಗಿರುವ ಕೃತ್ಯಕ್ಕೆ ಬಳಸಿರುವುದು ಈ ಪ್ರಾಧಿಕಾರದಲ್ಲಿ ಮೇಲ್ನೋಟಕ್ಕೆ ಸಾಬೀತು ಆಗಿರುವುದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಜೀಪು MM.540 ನಂ: KA-12-M-7357 ರ ಮಾಲೀಕರು ಸದರಿ ಪ್ರಕರಣವನ್ನು ಈ ಪ್ರಾಧಿಕಾರದ ಮುಂದೆ ನಡೆಸಲು ಶಕ್ತನಲ್ಲದ ಕಾರಣ ಹಾಗೂ ಸದರಿ ವಾಹನದ ಬಗ್ಗೆ ಈ ಪ್ರಾಧಿಕಾರದ ಕಾನೂನು ಪ್ರಕಾರ ಕೈಗೊಳ್ಳುವ ಕ್ರಮಕ್ಕೆ ತನ್ನದೇನು ಅಭ್ಯಂತರವಿಲ್ಲವೆಂದು ಲಿಖಿತ ಮೂಲಕ ವಿನಂತಿಸಿಕೊಂಡಿರುವುದರಿಂದ ಹಾಗೂ ವಾಹನದ ಬಗ್ಗೆ ಮುಂದೆ ಯಾರೂ ಹಕ್ಕು ಚಲಾಯಿಸದೇ ಇರುವ ಕಾರಣ ಮತ್ತು ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಅಧಿಕೃತವಾಗಿಯೇ ಸಾಗಾಣಿಕೆ ಮಾಡಲಾಗುತ್ತಿತ್ತು ಎಂಬುದನ್ನು ವಾಹನದ ಮಾಲೀಕರಾಗಲೀ, ಈ ಪ್ರಕರಣದಲ್ಲಿನ ಆರೋಪಿಗಳಾಗಲೀ ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸಲು ವಿಫಲರಾಗಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರ ಅಭಿಪ್ರಾಯಪಟ್ಟಿದೆ. ಹಾಗೂ ವಾಹನವನ್ನು ತೆರೆದ ಪ್ರದೇಶದಲ್ಲಿ ನಿಲ್ಲಿಸಿದ್ದು ಗಾಳಿ, ಮಳೆ, ಪ್ರಕೃತಿಯ ವಿಕೋಪಕ್ಕೆ ವಾಹನದ ಬಿಡಿ ಭಾಗಗಳು ತೀರಾ ತುಕ್ಕು ಹಿಡಿದು ಹಾಳಾಗುವ ಸನ್ನಿವೇಶವಿದ್ದು, ಇದರಿಂದ ಸರ್ಕಾರಕ್ಕೆ ಬರುವಂತಹ ಆದಾಯವು ಕೈ ತಪ್ಪುವ ಸಾಧ್ಯತೆ ಇರುವುದರಿಂದ ವಾಹನವನ್ನು ಕೂಡಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವುದರಿಂದ ಸರಕಾರಕ್ಕೆ ಆದಾಯವು ಬರುವ ಸಾಧ್ಯತೆ ಇರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವಾಗಿರುತ್ತದೆ.

ಆದುದರಿಂದ ಈ ಕೆಳಗಿನಂತೆ ಆದೇಶ:

**ಆದೇಶ**

**ನಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:200/2003-04, ದಿನಾಂಕ: 5ನೇ ಮೇ 2004**

ಈ ಪ್ರಕರಣದ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶದಂತೆ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರಕಾರದಿಂದ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ವಿರಾಜಪೇಟೆ ಸಂಚಾರಿದಳದ ಅಬಕಾರಿ ಉಪ ನಿರೀಕ್ಷಕರು ಪ್ರಥಮ ವರದಿ ನಂ: 15/2003-04, ದಿನಾಂಕ: 26-3-2004 ರಲ್ಲಿ ಸ್ವಾಧೀನ ಪಡಿಸಿಕೊಂಡ ಜೀಪು MM.540 ನಂ: KA-12-M-7357 ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ)(2)ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 5-5-2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ, ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡಿರುವ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು ಎಂದು ಆದೇಶಿಸಿರುತ್ತೇನೆ.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 901

**ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನ್ಯಾಯಾಲಯದಲ್ಲಿ**
**ಅಧಿಭಾರ ಅರ್ಜಿ ಸಂಖ್ಯೆ.ಡಿಆರ್‌ಟಿ:2:2004-2005**

| **ವಾದಿ** | **ವಿರುದ್ಧ** | **ಪ್ರತಿವಾದಿ** |
|---|---|---|
| ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು (ಸ್ವಪ್ರೇರಣೆ) | | ಶ್ರೀ ಎ. ಲಕ್ಷ್ಮೀನಾರಾಯಣ ಪ್ರಭಾರ ಕಾರ್ಯದರ್ಶಿ, ಟಿಎಪಿಸಿಎಂಎಸ್ ಲಿ, ಪಾವಗಡ, ತುಮಕೂರು ಜಿಲ್ಲೆ. |

1959ರ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ 103ನೇ ಕಲಂ ರೀತ್ಯ ಸ್ವಆದಾಯ ಸ್ಥಿರಾಸ್ತಿಯನ್ನು ತೀರ್ಪುಮುನ್ನ ಜಪ್ತಿಮಾಡಿರುವ ಕುರಿತು ನೋಟೀಸು.

ವರದಿಯು ಸ್ವಪ್ರೇರಣೆಯಿಂದ, ಪ್ರತಿವಾದಿ ವಿರುದ್ಧ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 69ರ ಕಲಂ ಅನ್ವಯ, ಅಧಿಭಾರ ಅರ್ಜಿಯನ್ನು ದಾಖಲು ಮಾಡಿಕೊಂಡಿದ್ದು, ಪಾವಗಡ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ ಪಾವಗಡ, ಇದರಲ್ಲಿ ಪ್ರತಿವಾದಿಯು ತನ್ನ ಕರ್ತವ್ಯನಿರ್ವಹಣೆಯಲ್ಲಿ ಸಂಘದ ಆಸ್ತಿ ದುರುಪಯೋಗಪಡಿಸಿರುವರೆನ್ನಲಾದ ಆರೋಪದ ಬಗ್ಗೆ ಕಲಂ 65ರ ಅಡಿಯಲ್ಲಿ ಪರಿವೀಕ್ಷಣೆ ನಡೆಸಲು ನೇಮಕವಾಗಿರುವ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಇವರ ಮಧ್ಯಂತರ ವರದಿ ಪ್ರಕಾರ ಒಟ್ಟು ರೂ.24,50,003-00 ರೂ.ಗಳ ದುರುಪಯೋಗಪಡಿಸಿರುವುದಾಗಿ ವರದಿ ಮಾಡಿರುವ ಹಿನ್ನೆಲೆಯಲ್ಲಿ, ಈ ಅಧಿಭಾರ ಅರ್ಜಿಯನ್ನು ಸ್ವಪ್ರೇರಣೆಯಿಂದ ದಾಖಲುಮಾಡಿಕೊಂಡು ಕಡತದ ಮೇಲೆ ದಿನಾಂಕ 5-6-2004 ರಂದು ತೆಗೆದುಕೊಳ್ಳಲಾಗಿದೆ.

ಪ್ರತಿವಾದಿಯ ಸಂಘದ ಪರವಾಗಿ, ಕಾರ್ಯದರ್ಶಿಯು ದಿನಾಂಕ: 5-6-2004 ರಂದು ಹಾಜರಾಗಿ, 1959ರ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ ಕಲಂ 103 ಅನ್ವಯ ಅರ್ಜಿಯಲ್ಲಿ ಕಾಣಿಸಿರುವ ಪ್ರತಿವಾದಿಯ ಹೆಸರಿನಲ್ಲಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಮೇಲ್ಕಂಡ ಅಧಿಭಾರ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯವರು ಈ ಸ್ವತ್ತನ್ನು ಉದ್ದೇಶಪೂರ್ವಕವಾಗಿ ಕ್ರಯ ಮಾಡಲು:ಪರಭಾರೆಮಾಡಲು ಉದ್ದೇಶ ಹೊಂದಿರುವವರಾಗಿರುತ್ತಾರೆಂದು ಇದನ್ನು ತಡೆಹಿಡಿಯದಿದ್ದಲ್ಲಿ, ಪ್ರತಿವಾದಿಯ ವಿರುದ್ಧ ಈ ನ್ಯಾಯಾಲಯವು ಅವಾರ್ಡು: ಡಿಕ್ರಿ ನೀಡಿದಲ್ಲಿ ಪ್ರತಿವಾದಿಯಿಂದ ಸಂಘಕ್ಕೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹ ಇಲ್ಲದ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇರುತ್ತದೆ ಎಂದು, ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ಅಧಿಭಾರ ಅರ್ಜಿ ಮತ್ತು ಸದರಿ ಕಾಯಿದೆಯ ಕಲಂ 103ರ ರೀತ್ಯ, ಸಲ್ಲಿಸಿರುವ ಅರ್ಜಿಯನ್ನು ಪರಿಶೀಲಿಸಿ, ಸಂಘವು ಕಲಂ 103ರ ಅಡಿಯಲ್ಲಿನ ಕೋರಿಕೆ ಅರ್ಜಿಯಲ್ಲಿನ ಅಂಶಗಳು ಸತ್ಯವಾಗಿರುತ್ತವೆ. ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ. ಪ್ರತಿವಾದಿಯು ಸಂಘಕ್ಕೆ ಹೆಚ್ಚು ಮೊತ್ತದ ಹಣ ಪಾವತಿಸಬೇಕಾಗಿರುವುದರಿಂದ ಅವರು ಇದರಿಂದ ತಪ್ಪಿಸಿಕೊಳ್ಳುವ ಉದ್ದೇಶಕ್ಕೆ ಕಡಿವಾಣ ಹಾಕಲು ಅವರ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿಮಾಡುವುದು ಅವಶ್ಯಕವೆನಿಸಿರುತ್ತದೆ.

ಆದ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಅಂಶಗಳನ್ನು ಗಮನಿಸಿ, 1959ರ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ ಕಲಂ 103ರ ಪ್ರಕಾರ ದತ್ತವಾಗಿರುವ ಅಧಿಕಾರದಿಂದ ಮೊಹಮದ್ ಸಲೀಂ, ತುಮಕೂರು ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಆದ ನಾನು ಪ್ರತಿವಾದಿಯ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಗಳನ್ನು ಷರತ್ತಿಗೆ ಒಳಪಟ್ಟು ತೀರ್ಪು ಪೂರ್ವ ಜಪ್ತಿ ಮಾಡಿ ಆದೇಶಿಸಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯುವ ಬಗ್ಗೆ ಅಪೇಕ್ಷಿಸಿದಲ್ಲಿ ಇಪ್ಪತ್ತನಾಲ್ಕು ಲಕ್ಷದ ಐವತ್ತು ಸಾವಿರದ ಮೂರು ರೂಪಾಯಿಗಳು (ರೂ.24,50,003) ಗಳನ್ನು ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ ಪಾವಗಡ ತುಮಕೂರು ಜಿಲ್ಲೆ, ಈ ಸಂಘದಲ್ಲಿ ನಗದಾಗಿ ಠೇವಣಿ ಮಾಡಿ ದಿನಾಂಕ 5-7-2004ರ ಒಳಗಾಗಿ ಅಧಿಕೃತ ಚಲನ್:ರಸೀತಿಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ಹಾಜರುಪಡಿಸಲು ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದ ಒಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಮರುದಿನವೇ ಸ್ಥಿರೀಕರಿಸಲಾಗುವುದು. ಈ ಕೆಳಗೆ ನಮೂದಿಸಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ, ಆಸಕ್ತಿ ಹೊಂದುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪುಪೂರ್ವ ಜಪ್ತಿಯ ಈ ಆದೇಶವು ಯಥಾವತ್ತಾಗಿ ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

| ಗ್ರಾಮ | ಸರ್ವೆ ನಂ. | ಎಕರೆ ಗುಂಟೆ | ಯಾರ ಹೆಸರಿನಲ್ಲಿದೆ |
|---|---|---|---|
| ಸುಂಕಾರ್ಲಕುಂಟೆ | 122 | 3.02 | ತಾಯಿ:ತಿಮ್ಮಕ್ಕ |
| | **ಚಕ್ಕುಬಂದಿ:** ಪೂರ್ವಕ್ಕೆ: | ತಾಮನಾಯಕರ ಜಮೀನು | |
| | ಪಶ್ಚಿಮಕ್ಕೆ: | ತಿಪ್ಪಬಾಯಿ ಜಮೀನು | |
| | ಉತ್ತರಕ್ಕೆ: | ಬಸಪ್ಪನವರ ಜಮೀನು | |
| | ದಕ್ಷಿಣಕ್ಕೆ: | ನಡಿಪಣ್ಣನವರ ಜಮೀನು | |
| ಗ್ರಾಮ | ಸರ್ವೆ ನಂ. | ಎಕರೆ ಗುಂಟೆ | ಯಾರ ಹೆಸರಿನಲ್ಲಿದೆ |
| 2. ಸುಂಕಾರ್ಲಕುಂಟೆ | 122 | 2.31 | ತಾಯಿ:ತಿಮ್ಮಕ್ಕ |
| | **ಚಕ್ಕುಬಂದಿ:** ಪೂರ್ವಕ್ಕೆ: | ತಾಮನಾಯಕ ಜಮೀನು | |
| | ಪಶ್ಚಿಮಕ್ಕೆ: | ತಿಪ್ಪಬಾಯಿ ಜಮೀನು | |
| | ಉತ್ತರಕ್ಕೆ: | ಸ್ವಂತ | |
| | ದಕ್ಷಿಣಕ್ಕೆ: | ನೇಡಿಪಣ್ಣನವರ ಜಮೀನು | |

| ಗ್ರಾಮ | ಸರ್ವೆ ನಂ. | ಎಕರೆ ಗುಂಟೆ | ಯಾರ ಹೆಸರಿನಲ್ಲಿದೆ |
|---|---|---|---|
| 3. ಕಣಿವೇನಹಳ್ಳಿ | 56:2 | 6.00 | ಮಗ ಪಿ.ಎಲ್. ಫಣೀಂದ್ರಕುಮಾರ್ |

**ಚಕ್ಕುಬಂದಿ:** ಪೂರ್ವಕ್ಕೆ: ನಾಗಪ್ಪನ ಜಮೀನು
ಪಶ್ಚಿಮಕ್ಕೆ: ವೆಂಕಟರಾಮರೆಡ್ಡಿ ಜಮೀನು
ಉತ್ತರಕ್ಕೆ: ಸೂರ್ಯನಾರಾಯಣರೆಡ್ಡಿ ಜಮೀನು
ದಕ್ಷಿಣಕ್ಕೆ: ಇದೇ ನಂಬರಿನ ಉಳಿಕೆ ಜಮೀನು

| ಗ್ರಾಮ | ಸರ್ವೆ ನಂ. | ಎಕರೆ ಗುಂಟೆ | ಯಾರ ಹೆಸರಿನಲ್ಲಿದೆ |
|---|---|---|---|
| 4. ಕಣಿವೇನಹಳ್ಳಿ | 45:1 | 5.27 | ತಾಯಿ ತಿಮ್ಮಕ್ಕ |

**ಚಕ್ಕುಬಂದಿ:** ಪೂರ್ವಕ್ಕೆ: ಪಾವಗಡ ಹಿಂದೂಪುರ ರಸ್ತೆ
ಪಶ್ಚಿಮಕ್ಕೆ: ಈರಣ್ಣನ ಜಮೀನು
ಉತ್ತರಕ್ಕೆ: ಲಕ್ಷ್ಮಣರೆಡ್ಡಿಯವರ ಜಮೀನು
ದಕ್ಷಿಣಕ್ಕೆ: ಇದೇ ನಂಬರಿನ ಉಳಿಕೆ ಜಮೀನು

| ಗ್ರಾಮ | ಸರ್ವೆ ನಂ. | ಎಕರೆ ಗುಂಟೆ | ಯಾರ ಹೆಸರಿನಲ್ಲಿದೆ |
|---|---|---|---|
| 5. ಕಣಿವೇನಹಳ್ಳಿ | 42:2 | 2.14 | ತಾಯಿ ತಿಮ್ಮಕ್ಕ |

**ಚಕ್ಕುಬಂದಿ:** ಪೂರ್ವಕ್ಕೆ: ಭೂಮರೆಡ್ಡಿಯವರ ಜಮೀನು
ಪಶ್ಚಿಮಕ್ಕೆ: ನರಸಿಂಹಪ್ಪರವರ ಜಮೀನು
ಉತ್ತರಕ್ಕೆ: ತಿಮ್ಮಪ್ಪರವರ ಜಮೀನು
ದಕ್ಷಿಣಕ್ಕೆ: ಲಕ್ಷನಾಯಕರವರ ಜಮೀನು

| ಗ್ರಾಮ | ಸರ್ವೆ ನಂ. | ಎಕರೆ ಗುಂಟೆ | ಯಾರ ಹೆಸರಿನಲ್ಲಿದೆ |
|---|---|---|---|
| 6. ಜಾಜೂರಾಯರುಳ್ಳಿ | 413 | 2.34 | ಮಗ ಪಿ.ಎಲ್. ನರೇಂದ್ರಕುಮಾರ್ ಮತ್ತು ಪಿ.ಎಲ್. ಫಣೇಂದ್ರಕುಮಾರ್ |
| 7. ಜಾಜೂರಾಯರುಳ್ಳಿ | 410 | 4.31 | ಮಗ ಪಿ.ಎಲ್. ನರೇಂದ್ರಕುಮಾರ್ ಮತ್ತು ಪಿ.ಎಲ್. ಫಣೇಂದ್ರಕುಮಾರ್ |
| 8. ಜಾಜೂರಾಯರುಳ್ಳಿ | 411 | 4.00 | ಮಗ ಪಿ.ಎಲ್. ನರೇಂದ್ರಕುಮಾರ್ ಮತ್ತು ಪಿ.ಎಲ್. ಫಣೇಂದ್ರಕುಮಾರ್ |
| 9. ಜಾಜೂರಾಯರುಳ್ಳಿ | 412 | 5.35 | ಮಗ ಪಿ.ಎಲ್. ನರೇಂದ್ರಕುಮಾರ್ ಮತ್ತು ಪಿ.ಎಲ್. ಫಣೇಂದ್ರಕುಮಾರ್ |

**ಚಕ್ಕುಬಂದಿ:** ಪೂರ್ವಕ್ಕೆ: ಕೆರೆ
ಪಶ್ಚಿಮಕ್ಕೆ: ಪಾವಗಡ - ಹಿಂದೂಪುರ ರಸ್ತೆ
ಉತ್ತರಕ್ಕೆ: ಜಗನ್ನಾಥಚಾರಿ ಜಮೀನು

ಪಾವಗಡ ಪಟ್ಟಣದಲ್ಲಿ ಮಸೀದಿ ರಸ್ತೆಯಲ್ಲಿ ಮುನಿಸಿಪಲ್ ಖಾತೆ ನಂ.974:681 ಉಳ್ಳ 51 x 12 ಅಡಿಗಳ ಆರ್‌ಸಿಸಿ 31 x 12 ಅಡಿಗಳ ಮಹಡಿ ಆರ್‌ಸಿಸಿ ಎ. ಲಕ್ಷ್ಮೀನಾರಾಯಣ ಬಿನ್ ಪೆದ್ದ ಅಂಜಿನಪ್ಪ ಇವರ ಹೆಸರಿನಲ್ಲಿರುತ್ತೆ.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ನ್ಯಾಯಾಲಯದ ಮುದ್ರೆಯೊಂದಿಗೆ ದಿ: 5-6-2004 ರಂದು ನೀಡಿರುತ್ತೇನೆ.

**ಮೊಹಮದ್ ಸಲೀಂ**
ಪಿ.ಆರ್. 902 ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-5, ಕಾರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-2/2004, ದಿನಾಂಕ: 21ನೇ ಜೂನ್ 2004**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ಶ್ರೀ ಎನ್.ಆರ್. ಕೆಂಪದಾಸು ಬಿನ್ ಲೇಟ್ ರಘುವೇಗೌಡ<br>2. ಶ್ರೀಮತಿ ವೆಂಕಟಮ್ಮ ಕೋಂ ಶ್ರೀ ಎನ್.ಆರ್. ಕೆಂಪದಾಸು<br>3. ಕು:ಆಶಾ ರಾಣಿ @ ಆಶಾ ಬಿನ್ ಲೇಟ್ ಹನುಮಂತಯ್ಯ ವಾಸ: ನೆಲಮಾಕನಹಳ್ಳಿ, ಇಗ್ಗಲೂರು ಅಂಚೆ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾ.ಜಿಲ್ಲೆ. | | 1. ದಿ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ನಂ.67/1, 1ನೇ ಮಹಡಿ, ರೆಡ್ಡಿ ಕಾಂಪ್ಲೆಕ್ಸ್, ವೈಟ್ ಫೀಲ್ಡ್ ರಸ್ತೆ, ಮಹದೇವಪುರ ಪೋಸ್ಟ್, ಬೆಂಗಳೂರು-48.<br>2. ಶ್ರೀ ಎನ್. ವೆಂಕಟಪತಿ, ಬಿನ್ ಶ್ರೀ ನಾರಾಯಣಪ್ಪ ನಂ.275, 6ನೇ ಕ್ರಾಸ್, 3ನೇ ಮುಖ್ಯರಸ್ತೆ, ಸಿದ್ದಾಪುರ, ಜಯನಗರ, ಬೆಂಗಳೂರು. |

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:13-2-2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1 ಹಾಗೂ 2ನೇ ಅರ್ಜಿದಾರರ ಮಗ, 3ನೇ ಅರ್ಜಿದಾರರ ತಂದೆಯಾದ ಶ್ರೀ ಹನುಮಂತಯ್ಯ ಇವರು ಮೇಲೆ ವಿಳಾಸಿಸಿರುವ 2ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ

ಪಿ.ಆರ್. 903 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ ಉಪ ವಿಭಾಗ-5, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-5, ಕಾರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-3/2004, ದಿನಾಂಕ: 21ನೇ ಜೂನ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಅರ್ಜಿದಾರರು:

1. ಶ್ರೀ ಗಂಗಣ್ಣ ಬಿನ್ ಲೇ. ತಿಮ್ಮಪ್ಪಣ್ಣ
2. ಶ್ರೀಮತಿ ಜಯಮ್ಮ ಕೋಂ ಗಂಗಣ್ಣ
   ವಾಸ: ಕೊಡಗಿ ಬೊಮ್ಮನಹಳ್ಳಿ ತ್ಯಾಮಗೊಂಡ್ಲು ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಪ್ರತಿವಾದಿಗಳು:

1. ಎ. ಸಿದ್ದಪ್ಪ ಬಿನ್ ಅಯ್ಯಣ್ಣಪ್ಪ ಮಂಚಕಲ್ಲುಕುಪ್ಪೆ, ಹಿರೇಹಳ್ಳಿ ಅಂಚೆ, ತುಮಕೂರು ತಾಲ್ಲೂಕು ಮತ್ತು ಜಿಲ್ಲೆ.
2. ದಿ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ನಂ.55, ಈಶ್ವರಿ ಕಾಂಪ್ಲೆಕ್ಸ್, ಡಾ:ರಾಜ್ ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10
3. ಶ್ರೀ ಪಳನಿ, ನಂ.2183, 5ನೇ ಕ್ರಾಸ್, ಭದ್ರಪ್ಪ ಲೇಔಟ್, ನಾಗಶೆಟ್ಟಿಹಳ್ಳಿ, ಬೆಂಗಳೂರು-94.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:19-5-2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1 ಹಾಗೂ 2ನೇ ಅರ್ಜಿದಾರರ ಮಗ, ಸಿದ್ದಪ್ಪ ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ

ಪಿ.ಆರ್. 904 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ ಉಪ ವಿಭಾಗ-5, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-5, ಕಾರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-14/2003, ದಿನಾಂಕ: 21ನೇ ಜೂನ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಅರ್ಜಿದಾರರು:

1. ಶ್ರೀಮತಿ ಮುರುಗಮಲ್ ಕೋಂ ಲೇಟ್ ದೇವರಾಜ್
2. ಮಾ:ಗೋವಿಂದರಾಜು ಬಿನ್ ಲೇಟ್ ದೇವರಾಜ್
3. ಶ್ರೀ ತೊಟ್ಟಿ @ ಪೇತಪ್ಪ ನಾಯ್ಡು ಬಿನ್ ವೆಂಕಟಪ್ಪ ನಾಯ್ಡು
4. ಶ್ರೀಮತಿ ಗೌರಿ ಕೋಂ ತೊಟ್ಟಿ @ ಪೇತಪ್ಪ ನಾಯ್ಡು
   ವಾಸ:ದೊಡ್ಡಿಗೊಲ್ಲಪಲ್ಲಿ, ಬಂಡ ಸೀಮನೂರು ಅಂಚೆ, ಕೃಷ್ಣಗಿರಿ ತಾಲ್ಲೂಕು, ಧರ್ಮಪುರಿ ಜಿಲ್ಲೆ.

ಪ್ರತಿವಾದಿಗಳು:

ಮೆ: ಹಿರಿದೇಶ್ ಗುಪ್ತಾ, ಪ್ರೊಪ್ರೈಟರ್, ಪ್ರಭಾತ ಎಂಟರ್ ಪ್ರೈಸಸ್, ಜ್ಯೋತಿ ಗ್ಯಾಸ್‌ನ ಅಧಿಕೃತ ಮಾರಾಟಗಾರರು, ನಂ.628/1, ಅವಿನ್ಯೂ ರಸ್ತೆ ಬೆಂಗಳೂರು-22.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:17-11-2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿ, 2ನೇ ಅರ್ಜಿದಾರರ ತಂದೆ, 3 ಹಾಗೂ 4ನೇ ಅರ್ಜಿದಾರರ ಮಗನಾದ ಶ್ರೀ ದೇವರಾಜ್ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ

ಪಿ.ಆರ್. 905 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ ಉಪ ವಿಭಾಗ-5, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-5, ಕಾರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-4/2004, ದಿನಾಂಕ: 21ನೇ ಜೂನ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಲಕ್ಷ್ಮಮ್ಮ ಕೋಂ ಲೇಟ್ ನಾಗರಾಜ್
2. ಸಂತೋಷ್ ಬಿನ್ ಲೇಟ್ ನಾಗರಾಜ್
3. ಸಂಪತ್ ಬಿನ್ ಲೇಟ್ ನಾಗರಾಜ್,
ರಸ್ತೆ ಪಾಳ್ಯ, ಬಿಡಿನಗೆರೆ ಪೋಸ್ಟ್,
ತಿಪ್ಪಸಂದ್ರ ಹೋಬಳಿ, ಮಾಗಡಿ ತಾಲ್ಲೂಕು,
ಬೆಂಗಳೂರು ಜಿಲ್ಲೆ.

ಪ್ರತಿವಾದಿಗಳು:

1. ಎ. ಸುರೇಶ್, ಬಿನ್ ಹೊನ್ನಪ್ಪ, ಕೋಡಿ ಪಾಳ್ಯ,
ದೊಡ್ಡಮಡಗಿರಿ ಅಂಚೆ, ತಿಪ್ಪಸಂದ್ರ ಹೋಬಳಿ,
ಮಾಗಡಿ ತಾಲ್ಲೂಕು. ಬೆಂಗಳೂರು ಜಿಲ್ಲೆ.
2. ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ.,
ಮಂಜುನಾಥೇಶ್ವರ ಕಾಂಪ್ಲೆಕ್ಸ್, ಬಸ್ ಸ್ಟ್ಯಾಂಡ್
ರಸ್ತೆ, ಹಾಸನ.
3. ಮಹಮದ್ ಫಯಾಜ್ ಬಿನ್ ಅಬ್ದುಲ್ ರಜಾಕ್
ಸಾಬ್ ಲಾರಿ ಸರ್ವಿಸ್, ಬಿ.ಹೆಚ್. ರಸ್ತೆ,
ಹುಳಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು,
ತುಮಕೂರು ಜಿಲ್ಲೆ.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:24-5-2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿ 2 ಹಾಗೂ 3ನೇ ಅರ್ಜಿದಾರರ ಮಗ ಅವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ

ಪಿ.ಆರ್. 906 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ ಉಪ ವಿಭಾಗ-5, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-4, ಕಾರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-560 029**

**ಪ್ರಕರಣ ಸಂಖ್ಯೆ:ಡಬ್ಲ್ಯುಸಿಎ:ಎಫ್‌ಸಿ:ಸಿಆರ್-21:2004 ದಿನಾಂಕ: 18ನೇ ಜೂನ್ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ E. ಪ್ರಮೀಳ W/o ದಿ॥ ಭಕ್ತವತ್ಸಲಮ್
2. ಬಿ. ನಂದಿನಿ D/o ದಿ॥ ಭಕ್ತವತ್ಸಲಮ್
3. ಬಿ. ಆಶಾ D/o ದಿ॥ ಭಕ್ತವತ್ಸಲಮ್
ನಂ. 139/G ರೇಲ್ವೆಕಾಲೋನಿ ಯಶವಂತಪುರ,
ಬೆಂಗಳೂರು.

ಪ್ರತಿವಾದಿಗಳು:

ದಿ ಸೀನಿಯರ್ ಡಿವಿಜನಲ್ ಪರ್ಸನಲ್ ಆಫೀಸರ್
ಸೌತ್ ವೆಸ್ಟರ್ನ್ ರೇಲ್ವೇಸ್ ಬೆಂಗಳೂರು - 560 023.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ E ಪ್ರಮೀಳ ಮತ್ತು ಇತರೆ 2 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಭಕ್ತವತ್ಸಲಮ್ ಇವರು ಪ್ರತಿವಾದಿಯವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 907 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-4, ಬೆಂಗಳೂರು.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:F:19/2004, ದಿನಾಂಕ: 17ನೇ ಜೂನ್ 2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಬುಡುಂಬಿ ಗಂಡ ರಾಜಾಸಾಬ ಯಲಗಾರ R/o ಹೊಸಳ್ಳಿ ತಾ॥ಜಿ॥ಕೊಪ್ಪಳ. | | 1. ಎ. ನಾರಾಯಣ ಕಂಟ್ರಾಕ್ಟರ್, ಮೆ॥ ಕಿರ್ಲೋಸ್ಕರ್ ಫೆರಸ್ ಇಂಡಸ್ಟ್ರೀಸ್, ಲಿ., ಬೇವಿನಹಳ್ಳಿ. ತಾ॥ ಕೊಪ್ಪಳ.<br>2. ಮ್ಯಾನೇಜರ್, ದಿ ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ., ಹೊಸಪೇಟೆ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ:ಶ್ರೀ:ಶ್ರೀಮತಿ ಬಾಷು ಸಾಬ @ ಬಾಷಾಸಾಬ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:9.5.2004 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ ಬಾಷುಸಾಬ ರಾದ ಶ್ರೀಮತಿ ಬುಡುಂಬಿ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದು ಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 908 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ:ಕಾಪಕಾ:ಎಫ್:ಎಸ್ಆರ್-22:2002**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ಚಂದ್ರಶೇಖರ್ ಅಲಿಯಾಸ್ ಚಂದ್ರಣ್ಣ, ವಯಸ್ಸು 50 ವರ್ಷ ಬಿನ್ ವೀರಭದ್ರೇಗೌಡ<br>2. ಶ್ರೀಮತಿ ಸಾವಿತ್ರಮ್ಮ ಕೋಂ ಚಂದ್ರಶೇಖರ ಅಲಿಯಾಸ್ ಚಂದ್ರಣ್ಣ. ವಾಸ: ಮಂದಿರ ಗ್ರಾಮ, ಕುಂದೂರು ಹೋಬಳಿ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ. | | 1. ಶ್ರೀ ಕೆ.ಡಿ. ಮೋನಿ, ಬಿನ್ ಕೆ.ವಿ. ಡೇನಿಯಲ್, ಸಿಲ್ವರ್ ಜ್ಯೂಬಿಲಿ ಪಾರ್ಕ್‌ರಸ್ತೆ, ಕ್ರಿಶ್ಚಿಯನ್ ಕಾಲೋನಿ, ಹಾಸನ.<br>2. ಶ್ರೀ ಎಂ.ಕೆ. ಗೋವರ್ಧನ ಕುಮಾರ್, ಬಿನ್ ಲೇಟ್ ಎಂ.ಕೆ. ಸ್ವಾಮಿ, ಪಿ.ಬಿ. ನಂ.27, ಶಂಕರೀಪುರಂ, ಹಾಸನ.<br>3. ದಿ ಓರಿಯಂಟಲ್ ಇನ್ ಶ್ಯೂರೆನ್ಸ್ ಕಂ. ಲಿ., ವೆಂಕಟೇಶ್ವರ ಬಿಲ್ಡಿಂಗ್ ಗಾಂಧಿಬಜಾರ್ ಸರ್ಕಲ್, ಬಿ.ಎಂ.ರಸ್ತೆ, ಹಾಸನ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸೋಮಶೇಖರ್ ಬಿನ್ ಚಂದ್ರಶೇಖರ್‌ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 02-04-2002 ರಂದು ಸಾವನ್ನಪ್ಪಿರುತ್ತಾರೆ. ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 909 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ:ಕಾಪಕಾ:ಎಫ್:ಎಸ್ಆರ್-17:2004**

**ಅರ್ಜಿದಾರರು**

1. ಶ್ರೀ ರಂಗೇಗೌಡ ಉರುಫ್ ರಾಜೇಗೌಡ ಬಿನ್ ರಂಗೇಗೌಡ
2. ಸುಂದರಮ್ಮ ಕೋಂ ರಂಗೇಗೌಡ ಉರುಫ್ ರಾಜೇಗೌಡ, 35 ವರ್ಷ
3. ಶ್ರೀ ಪ್ರಸನ್ನಕುಮಾರ್ ಬಿನ್ ರಂಗೇಗೌಡ ಉರುಫ್ ರಾಜೇಗೌಡ
   ವಾಸ:ದಾಸನಕೊಣನೂರು, ಮಲ್ಲಿಪಟ್ಟಣ ಹೋಬಳಿ, ಅರಕಲಗೂಡು ತಾಲ್ಲೂಕು.

**ವಿರುದ್ಧ ಪ್ರತಿವಾದಿಗಳು**

1. ಶ್ರೀ ಸಣ್ಣೇಗೌಡ ಬಿನ್ ಸಣ್ಣೇಗೌಡ, ದೊಡ್ಡಮಗ್ಗೆ ಗ್ರಾಮ, ದೊಡ್ಡಮಗ್ಗೆ ಹೋಬಳಿ, ಅರಕಲಗೂಡು ತಾಲ್ಲೂಕು.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ., ಡಿವಿಜನಲ್ ಆಫೀಸ್, ಮಡಿಕೇರಿ (ಮುಖ್ಯ ಕಛೇರಿ)
3. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ., ಹೇಮಾ ಮ್ಯಾನ್ಸನ್, 2ನೇ ಮಹಡಿ, ಪಿ.ಬಿ.ನಂ. 96, ಗಾಂಧಿಬಜಾರ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಘು ಉರುಫ್ ಪಿ.ಆರ್. ವಿಜಯಕುಮಾರ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 20.11.2003 ರಂದು ಸಾವನ್ನಪ್ಪಿರುತ್ತಾರೆ. ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 910 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ:ಕಾಪಕಾ:ಎಫ್:ಎಸ್ಆರ್-16:2004**

**ಅರ್ಜಿದಾರರು**

1. ಶ್ರೀಮತಿ ಜಾನಕಿ ಕೋಂ ಧರ್ಮ ಅಲಿಯಾಸ್ ಧರ್ಮಾನ್, 26 ವರ್ಷ
2. ಅಖಿಲ ಬಿನ್ ಧರ್ಮ ಅಲಿಯಾಸ್ ಧರ್ಮಾನ್, 8 ವರ್ಷ
3. ಹರಿ ಬಿನ್ ಧರ್ಮ ಅಲಿಯಾಸ್ ಧರ್ಮಾನ್, 3 ವರ್ಷ
4. ತಿಮ್ಮಪ್ಪ ಬಿನ್ ನಂಜಪ್ಪ, 60 ವರ್ಷ
5. ಶ್ರೀಮತಿ ಗಂಗಾ ಕೋಂ ತಿಮ್ಮಪ್ಪ, 58 ವರ್ಷ
6. ಹೇಮ ಬಿನ್ ತಿಮ್ಮಪ್ಪ, 15 ವರ್ಷ
   ವಾಸ: ಕಾಡಮನೆ ಎಸ್ಟೇಟ್, ಹಾಸ್‌ಬಾಳ್ ಹೋಬಳಿ, ಸಕಲೇಶಪುರ ತಾ:

**ವಿರುದ್ಧ ಪ್ರತಿವಾದಿಗಳು**

1. ಮೆ:ಕಾಡಮನೆ ಬೀ ಎಸ್ಟೇಟ್ ಕಂಪನಿ, ಕೆ.ಡಿ.ಎಂ. ವಿಭಾಗ, ಕಾಡಮನೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.
2. ದಿ ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂಪನಿ ನಿಯಮಿತ, ಬ್ರಾಂಚ್ ಆಫೀಸ್, ಬಸ್ ಸ್ಟ್ಯಾಂಡ್ ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಧರ್ಮಾನ್ ಅಲಿಯಾಸ್ ಧರ್ಮಾನ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 24.9.2003 ರಂದು ಸಾವನ್ನಪ್ಪಿರುತ್ತಾರೆ. ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು

ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 911 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ:ಕಾಪಕಾ:ಎಫ್:ಎಸ್ಆರ್-13:2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:
1. ಶ್ರೀಮತಿ ಎಸ್.ಕೆ. ಮಂಜುಳ ಕೋಂ ಲೇಟ್ ಎಸ್. ಬಸವರಾಜು, 30 ವರ್ಷ
2. ಕು:ಬಿ. ಚೇತನ ಬಿನ್ ಲೇಟ್ ಎಸ್. ಬಸವರಾಜು, 13 ವರ್ಷ
3. ಬಿ. ಪ್ರತಿಭಾ ಬಿನ್ ಎಸ್. ಬಸವರಾಜು, 11 ವರ್ಷ
   ಕೆಹೆಚ್‌ಬಿ ಕಾಲೋನಿ, ಡೋರ್ ನಂ.47,
   ಎಲ್ಐಜಿ, ಚನ್ನರಾಯಪಟ್ಟಣ ಟೌನ್, ಹಾಸನ ಜಿಲ್ಲೆ.

ಪ್ರತಿವಾದಿಗಳು:
1. ಡಿಪೋ ಮ್ಯಾನೇಜರ್, ಕೆ.ಎಸ್.ಆರ್.ಟಿ.ಸಿ. ಚನ್ನರಾಯಪಟ್ಟಣ ಡಿಪೋ
2. ಡಿವಿಜನಲ್ ಕಂಟ್ರೋಲರ್, ಕೆ.ಎಸ್.ಆರ್.ಟಿ.ಸಿ., ಹಾಸನ ಡಿವಿಜನ್, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಎಸ್. ಬಸವರಾಜು ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 24.3.2004 ರಂದು ಸಾವನ್ನಪ್ಪಿರುತ್ತಾರೆ. ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 912 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ:ಕಾಪಕಾ:ಎಫ್:ಎಸ್ಆರ್-5:2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:
1. ಶ್ರೀಮತಿ ಮಂಗಳಗೌರಮ್ಮ ಕೋಂ ಲೇಟ್ ದೇವರಾಜು, 30 ವರ್ಷ
2. ನಿತ್ಯಾ ಬಿನ್ ಲೇಟ್ ದೇವರಾಜು, 8 ವರ್ಷ
3. ನಯನ ಬಿನ್ ಲೇಟ್ ದೇವರಾಜು, 6 ವರ್ಷ
   ವಾಸ:ಮುಳ್ಳಕೆರೆ, ನುಗ್ಗೆಹಳ್ಳಿ ಅಂಚೆ, ನುಗ್ಗೆಹಳ್ಳಿ ಹೋಬಳಿ,
   ಚನ್ನರಾಯಪಟ್ಟಣ ತಾ: ಹಾಸನ ಜಿಲ್ಲೆ.

ಪ್ರತಿವಾದಿಗಳು:
ಎಕ್ಸಿಕ್ಯೂಟಿವ್ ಇಂಜಿನಿಯರ್, ಮೆಸ್ಕಾಮ್, ಚನ್ನರಾಯಪಟ್ಟಣ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಎಂ.ಬಿ. ದೇವರಾಜು ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 28.6.2003 ರಂದು ಸಾವನ್ನಪ್ಪಿರುತ್ತಾರೆ. ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 913 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಬೆಂಗಳೂರು (ನಗರ) ಜಿಲ್ಲೆ, ಬೆಂಗಳೂರು**

**ಸಂ:ಜಿಸಕಅ(ನ)ಯೋ:ಸಿಆರ್:26:04-05, ದಿನಾಂಕ: 19ನೇ ಜೂನ್ 2004**

**ಪ್ರಕಟಣೆ**

**ವಿಷಯ:** 2004-05ನೇ ಸಾಲಿಗೆ ಆಡಳಿತ ನ್ಯಾಯಾಧಿಕರಣ ಯೋಜನೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

2004-05ನೇ ಸಾಲಿಗೆ ಆಡಳಿತ ನ್ಯಾಯಾಧಿಕರಣ ಯೋಜನೆಯಲ್ಲಿ ತರಬೇತಿ ನೀಡಲು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಅದರಂತೆ ಈ ಕೆಳಗೆ ನಮೂದಿಸಿರುವ ಷರತ್ತುಗಳನ್ನು ಪೂರೈಸಿದಲ್ಲಿ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಪಡೆಯಬಹುದು. ಈ ಪ್ರಕಟಣೆ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಒಂದು ತಿಂಗಳೊಳಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು ನಂತರ ಬಂದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ. **ಬೆಂಗಳೂರು(ನಗರ) ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವವರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.**

**ಷರತ್ತುಗಳು:-**

1. ಅಭ್ಯರ್ಥಿಗಳು 35 ವರ್ಷ ವಯೋಮಿತಿಯಲ್ಲಿರಬೇಕು.
2. ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷದ ಒಳಗೆ ಕಾನೂನು ಪದವಿಯನ್ನು ಪಡೆದಿರಬೇಕು.
3. ತರಬೇತಿ ಅವಧಿ 4 ವರ್ಷಗಳಾಗಿದ್ದು, ಮಾಸಿಕ ರೂ. 1000-00 ಶಿಷ್ಯ ವೇತನ ನೀಡಲಾಗುವುದು.
4. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪ್ರಾಸಿಕ್ಯೂಟರ್ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ತರಬೇತಿಗೆ ನಿಯೋಜಿಸಲಾಗುವುದು.
5. ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೇ ಬಿಟ್ಟು ಹೋಗಬಾರದು. ಈ ನಿಯಮ ಕೇಂದ್ರ ಮತ್ತು ರಾಜ್ಯ ಸರ್ಕಾರಿ ಉದ್ದಿಮೆಯಲ್ಲಿ ನೇಮಕಹೊಂದಿರುವವರಿಗೆ ಅನ್ವಯಿಸುವುದಿಲ್ಲ.
6. ಸುಳ್ಳು ದಾಖಲೆ ಮಾಹಿತಿಯನ್ನು ಒದಗಿಸಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನನ್ವಯ ಶಿಕ್ಷೆಗೆ ಗುರಿಪಡಿಸಲಾಗುವುದು. ಅನಂತರ ಅಭ್ಯರ್ಥಿಗಳಿಂದ ತರಬೇತಿಯ ಅವಧಿಯಲ್ಲಿ ನೀಡಿದ ಶಿಷ್ಯ ವೇತನವನ್ನು ಶೇ. 10 ರಷ್ಟು ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು.
7. ಬೆಂಗಳೂರು (ನಗರ) ಜಿಲ್ಲೆಯ ಅಭ್ಯರ್ಥಿಗಳು ಮಾತ್ರ ತರಬೇತಿಗೆ ಅರ್ಜಿ ಸಲ್ಲಿಸುವುದು.
8. ಅರ್ಜಿಯಲ್ಲಿ ಪೂರ್ಣ ಮಾಹಿತಿ ಇಲ್ಲದಿದ್ದ ಪಕ್ಷದಲ್ಲಿ, ಅರ್ಜಿ ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
9. ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
10. ಅರ್ಜಿ ಪಡೆಯಲು ಮತ್ತು ಸಲ್ಲಿಸಬೇಕಾದ ಪೂರ್ಣ ವಿಳಾಸ ಕೆಳಕಂಡಂತಿದೆ.

**ವಿಳಾಸ:-** ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಬೆಂಗಳೂರು (ನಗರ) ಜಿಲ್ಲೆ, 4ನೇ ಮುಖ್ಯ ರಸ್ತೆ, 16ನೇ ಅಡ್ಡರಸ್ತೆ, ಪೊಲೀಸ್ ಠಾಣೆ ಹತ್ತಿರ, ಸಂಪಂಗಿರಾಮನಗರ ಬೆಂಗಳೂರು-560 027.

ಪಿ.ಆರ್. 914 ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬೆಂಗಳೂರು (ನಗರ) ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ

## ಅಧಿಭಾರ ಅರ್ಜಿ ಸಂ.8:03-04

| **ಅರ್ಜಿದಾರರು** | **ಎದುರು ಅರ್ಜಿದಾರರು** |
|---|---|
| ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ) ಮಂಡಘಟ್ಟ, ಶಿವಮೊಗ್ಗ ತಾ: | ಕೆ.ಎಂ. ಮಹೇಶ್, ಮಾಜಿ ಪಿಗ್ಮಿ ಏಜೆಂಟ್ ವಿಎಸ್‌ಎಸ್‌ಬಿಎನ್, ಮಂಡಘಟ್ಟ, ಶಿವಮೊಗ್ಗ ತಾ: |

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತಿ ಆಜ್ಞೆ)**

**ಪ್ರಸ್ತಾವನೆ:-**

ಅರ್ಜಿದಾರರ ಬ್ಯಾಂಕ್ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 59 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ಬ್ಯಾಂಕಿನ 1999-2000ನೇ ಸಾಲಿನ ಲೆಕ್ಕಪರಿಶೋಧನೆಯ ರೀತ್ಯಾ ದುರುಪಯೋಗವಾಗಿದೆಯೆಂಬ ಆಪಾದನೆಗೆ ಒಳಗಾದ ಶ್ರೀ ಕೆ.ಎಂ. ಮಹೇಶ್, ಎದುರು ಅರ್ಜಿದಾರರಿಂದ ಒಟ್ಟು ರೂ.29954-00 ಗಳ ಪಿಗ್ಮಿ ಮೊತ್ತದ ಹಣದ ವಸೂಲಿ ಕ್ರಮಕ್ಕಾಗಿ ಅಧಿಭಾರ ಅರ್ಜಿ ಹೂಡಿ ಈ ಸಂಬಂಧವಾಗಿ ಅರ್ಜಿಯೊಂದನ್ನು ಸಲ್ಲಿಸಿ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡಿಸಲು ಎದುರು ಅರ್ಜಿದಾರರಿಗೆ ಮತ್ತು ತಂದೆಯಾದ ಶ್ರೀ ಕೆ.ಸಿ. ಮಲ್ಲೇಶಪ್ಪ, ಇವರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರನ್ವಯ ಷರತ್ತು ಪೂರ್ವಕ ಜಪ್ತಿ ಆಜ್ಞೆಯ ನೋಟೀಸನ್ನು ದಿನಾಂಕ:12-3-2004 ರಂದು ಈ ನ್ಯಾಯಾಲಯ ಹೊರಡಿಸಿದ್ದು, ಸದರೀ ಆಜ್ಞೆಯ ನೋಟೀಸ್ ಪ್ರತಿಯನ್ನು ಎದುರಿಗಳು ಪಡೆದು ಅದರಲ್ಲಿನ ಷರತ್ತುಗಳನ್ನು ಪೂರೈಸಲು ವಿಫಲರಾಗಿರುವುದರಿಂದ ದಿನಾಂಕ:12-3-2004 ರಂದು ಹೊರಡಿಸಿದ ಷರತ್ತು ಪೂರ್ವ ಜಪ್ತಿ ಆಜ್ಞೆಯನ್ನು ಸ್ಥಿರೀಕರಣಗೊಳಿಸಿ (ಖಾಯಂಗೊಳಿಸಿ) ಈ ಕೆಳಕಂಡಂತೆ ಆದೇಶಿಸಿದೆ.

## ಆದೇಶ

**ಕ್ರ.ಸನಿಶಿ24:ಎಬಿಎನ್:ಎಬಿಜೆ:03-04, ದಿನಾಂಕ: 27ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಎದುರು ಅರ್ಜಿದಾರರ ತಂದೆಯವರಾದ ಶ್ರೀ ಕೆ.ಸಿ. ಮಲ್ಲೇಶಪ್ಪ, ಇವರಿಗೆ ಸೇರಿದ ಈ ಕೆಳಕಂಡ "ಅನುಸೂಚಿ"ಯಲ್ಲಿ ತೋರಿಸಿದ ಸ್ಥಿರಾಸ್ತಿಗಳನ್ನು ಮೇಲ್ಕಂಡ ಅಧಿಭಾರ ಅರ್ಜಿಯ ತೀರ್ಪನ್ನು ಕಾಯ್ದಿರಿಸಿ ದಿನಾಂಕ:12-3-2004 ರ ಮತ್ತು ಪೂರ್ವಕ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸಿ ಆದೇಶಿಸಿದೆ.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತಿ ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಜಪ್ತಿ ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1) | ಕೆ.ಸಿ. ಮಲ್ಲೇಶಪ್ಪ ಬಿನ್ ಚನ್ನಬಸಪ್ಪ | ಅಡಗುಡಿ ಗ್ರಾಮ ಹಾರನಹಳ್ಳಿ ಹೋಬಳಿ ಶಿವಮೊಗ್ಗ ತಾ: | ಸರ್ವೆ ನಂ. ಎಂಆರ್2:01-02 ಅ.ಬ.ದು. | 0.35 ಗುಂಟೆ | ತರಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ಈ ದಿನ ದಿನಾಂಕ: 27-4-2004 ರಂದು ನೀಡಿದೆ.

ಪಿ.ಆರ್. 915 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಎಂಡಿ:14:2004-05, ದಿನಾಂಕ: 16ನೇ ಜೂನ್ 2004**

| | |
|---|---|
| **ವಾದಿ** | **ಪ್ರತಿವಾದಿಗಳು** |
| ವ್ಯವಸ್ಥಾಪಕ ನಿರ್ದೇಶಕರು, | ವ್ಯವಸ್ಥಾಪಕ ನಿರ್ದೇಶಕರು, |
| ಚಿತ್ರದುರ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, | ವಾಣಿವಿಲಾಸ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, |
| ಚಿತ್ರದುರ್ಗ | ಹಿರಿಯೂರು |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರ & ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.5,22,09,950-00 ಗಳನ್ನು ದಿನಾಂಕ:8-3-2004 ರಿಂದ ಶೇಕಡಾ 15 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ.ಜೆಆರ್‌ಬಿ:ಎಂಡಿ:14:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ವಾದಿಯು ಅವರ ಈ ಮೇಲ್ಕಂಡ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ & ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿಯು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ / ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ & ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.5,22,09,950-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:16-7-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ & ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರಗಳು**

**ಷೆಡ್ಯೂಲ್-I**

ವಾಣಿವಿಲಾಸ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ಹಿರಿಯೂರು ಈ ಕಾರ್ಖಾನೆಗೆ ಸೇರಿದ ಈ ಕೆಳಗೆ ತಿಳಿಸಿರುವಂತೆ ವಿವಿಧ ಸರ್ವೆ ನಂಬರ್‌ಗಳಲ್ಲಿ ಹೊಂದಿರುವ ಒಟ್ಟು 135 ಎಕರೆ 21 ಗುಂಟೆ ಜಮೀನು ಮತ್ತು ಸದರಿ ಜಮೀನಿನಲ್ಲಿ ಕಟ್ಟಲಾಗಿರುವ ಕಾರ್ಖಾನೆ ಕಟ್ಟಡ, ಬಾವಿ, ಮರಮುಟ್ಟುಗಳು ಇತ್ಯಾದಿ ಸೇರಿದಂತೆ,

| ಕ್ರ. ಸಂ. | ಸರ್ವೆ ನಂಬರ್ | ಜಮೀನಿನ ವಿವರ |
|---|---|---|
| 1 | 67 | 44 ಎಕರೆ 36 ಗುಂಟೆ |
| 2 | 66 | 63 ಎಕರೆ 31 ಗುಂಟೆ |
| 3 | 75 | 46 ಎಕರೆ 34 ಗುಂಟೆ |
| | **ಒಟ್ಟು** | **135 ಎಕರೆ 21 ಗುಂಟೆ** |

ಮೇಲ್ಕಂಡ ಜಮೀನುಗಳು ಹಿರಿಯೂರು ತಾಲ್ಲೂಕು ಮ್ಯಾಕಲೂರಹಳ್ಳಿ ಗ್ರಾಮದಲ್ಲಿರುವ ಕಾರ್ಖಾನೆಯ ಚಕ್ಕುಬಂದಿಯಲ್ಲಿ ಸೇರಿದ್ದು, ಹಾಲಿ ಇದು ಹಿರಿಯೂರು ಮುನಿಸಿಪಲ್ ವ್ಯಾಪ್ತಿಗೆ ಸೇರಿರುತ್ತದೆ. ಚಕ್ಕುಬಂದಿ:

1) **ಸರ್ವೆ ನಂ.67ಕ್ಕೆ ಸಂಬಂಧಿಸಿದಂತೆ:**
ಪೂರ್ವಕ್ಕೆ : ಆರ್.ಎಸ್.ನಂ.66
ಪಶ್ಚಿಮಕ್ಕೆ : ಆರ್.ಎಸ್.ನಂ.68/69
ಉತ್ತರಕ್ಕೆ : ಆರ್.ಎಸ್.ನಂ.70
ದಕ್ಷಿಣಕ್ಕೆ : ಕೃಷ್ಣಾಂಬುದಿ ಬಾರ್ಡರ್

2) **ಸರ್ವೆ ನಂ.66ಕ್ಕೆ ಸಂಬಂಧಿಸಿದಂತೆ ಚಕ್ಕುಬಂದಿ:**
ಪೂರ್ವಕ್ಕೆ : ಆರ್.ಎಸ್.ನಂ.65
ಪಶ್ಚಿಮಕ್ಕೆ : ಆರ್.ಎಸ್.ನಂ.67
ಉತ್ತರಕ್ಕೆ : ಆರ್.ಎಸ್.ನಂ.72/73
ದಕ್ಷಿಣಕ್ಕೆ : ಹಿರಿಯೂರು ಟೌನ್ ಬಾರ್ಡರ್

3) **ಸರ್ವೆ ನಂ.75ಕ್ಕೆ ಸಂಬಂಧಿಸಿದಂತೆ ಚಕ್ಕುಬಂದಿ:**
ಪೂರ್ವಕ್ಕೆ : ಆರ್.ಎಸ್.ನಂ.79
ಪಶ್ಚಿಮಕ್ಕೆ : ಆರ್.ಎಸ್.ನಂ.76
ಉತ್ತರಕ್ಕೆ : ಆರ್.ಎಸ್.ನಂ.77
ದಕ್ಷಿಣಕ್ಕೆ : ಆರ್.ಎಸ್.ನಂ.74

**ಷೆಡ್ಯೂಲ್-II**

110 ಅಡಿ x 500 ಅಡಿ ಅಳತೆಯುಳ್ಳ ಎ.ಸಿ. ಷೀಟ್ ಹೊಂದಿರುವ ಕಾರ್ಖಾನೆಯ ಮುಖ್ಯ ಕಟ್ಟಡ ಹಾಗೂ ಈ ಕೆಳಗೆ ತಿಳಿಸಿರುವ ಪ್ಲಾಂಟ್ ಮತ್ತು ಮೆಷಿನರಿಗಳು:

1. ಕೆ.ಸಿ.ಪಿ. ಶುಗರ್ ಪ್ಲಾಂಟ್
2. ಸ್ಪೇರ್ಸ್ ಅಂಡ್ ಅದರ್ಸ್
3. ವರ್ಕ್ ಷಾಪ್‌ಮೆಷಿನರಿ
4. ಬಾಯಿಲರ್ ಮತ್ತು ರಿಫ್ರೇಕ್ಟರಿ
5. ಅವೇರಿ ವೈಯಿಂಗ್ ಸ್ಕೇಲ್ಸ್
6. ಗೋಬರ್ ಗ್ಯಾಸ್ ಪ್ಲಾಂಟ್
7. ಹಾರ್ಟಿಕಲ್ಚರ್ ಗಾರ್ಡನ್‌ನಲ್ಲಿರುವ ಸಬ್‌ಮರ್ಸಿಬಲ್ ಪಂಪ್
8. ಕಂಟಿನ್ಯೂವಸ್ ಸೆಂಟ್ರಿಫ್ಯೂಗಲ್ಸ್

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 16-6-2004 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್. 916 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ,**

**ನಂ: ಎಸ್‌ಡಿಕೆ:329:ಡಿಟಿಸಿಆರ್:2002-2003 ದಿನಾಂಕ: 10ನೇ ಜೂನ್ 2004**

**ಉಪಸ್ಥಿತರು** : ಗೋವಿಂದಪ್ಪ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ, ಮಂಗಳೂರು.

| ಫಿರ್ಯಾದುದಾರರು | ವಿರುದ್ಧ | ಆರೋಪಿಗಳು |
|---|---|---|
| ಅಬಕಾರಿ ನಿರೀಕ್ಷಕರು,<br>ನಂ.3, ಅಬಕಾರಿ ಗುಪ್ತ ವಾರ್ತಾದಳ,<br>ಮಂಗಳೂರು ಉಪ ವಿಭಾಗ, ಮಂಗಳೂರು. | | 1. ಜೈಸನ್ ಜೆವಿಯರ್, (ಪ್ರಾಯ 27 ವರ್ಷ)<br>ಬಿನ್: ಜೆವಿಯರ್, ತಾಜಿಯತ್ ಹೌಸ್,<br>ವೈಸಕೇರಿ ಅಂಚೆ. ವಯಾ ವೈಯಾವೂರ್,<br>ತಳಿಪರಂಬ ತಾಲ್ಲೂಕು, ಕಣ್ಣೂರು ಜಿಲ್ಲೆ.<br>2. ಶ್ರೀ ರಾಜೇಶ್ ಎನ್.ಕೆ. (ಪ್ರಾಯ 26 ವರ್ಷ)<br>ಬಿನ್:ನಾಣ, ನಡುವಲಿಕಂಡಿ ಹೌಸ್, ಅಂಚೆ<br>ಫನ್ನಿಯಾಮ್ ವೆಸ್ಟ್, ತಲಚೇರು ತಾಲ್ಲೂಕು,<br>ಕಣ್ಣೂರು ಜಿಲ್ಲೆ, ಕೇರಳ-ವಾಹನದ ಸಹಾಯಕ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 21-11-2002 ರಂದು ಪೂರ್ವಾಹ್ನ ಸುಮಾರು 5.00 ಗಂಟೆಯ ಸಮಯ ಮಂಗಳೂರು ನಗರದ ಕುಂಟಿಕಾನ ಕ್ರಾಸ್‌ನಲ್ಲಿ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 17ರಲ್ಲಿ ಮಂಗಳೂರು ಗುಪ್ತವಾರ್ತಾದಳ ಅಬಕಾರಿ ನಿರೀಕ್ಷಕರು ತಮ್ಮ ಉಪ ಅಧೀಕ್ಷಕರ ನೇತೃತ್ವದಲ್ಲಿ ರಸ್ತೆಗಾವಲು ಮಾಡುತ್ತಿರುವಾಗ ಕೊಟ್ಟಾರ ಚೌಕಿ ಕಡೆಯಿಂದ ಕೆ.ಪಿ.ಟಿ ಕಡೆಗೆ ಲಾರಿ ಬರುತ್ತಿದ್ದು, ಅದನ್ನು ತಡೆದು ನಿಲ್ಲಿಸಲಾಗಿ ವಾಹನದಲ್ಲಿ ಇಬ್ಬರು ವ್ಯಕ್ತಿಗಳಿದ್ದು ಚಾಲಕನನ್ನು ವಿಚಾರಿಸಲಾಗಿ ಆತನು ತಾನು ಜೈಸನ್ ಕ್ಲೇವಿಯರ್, (ಪ್ರಾಯ 27 ವರ್ಷ) ಬಿನ್: ಕ್ಲೇವಿಯರ್, ತಾಜೆಯತ್ ಹೌಸ್, ವೈಸಕೇರಿ ಅಂಚೆ, ವಯಾ ಪೈಯಾವೂರ್, ತಳಿಪರಂಬ ತಾಲ್ಲೂಕು, ಕಣ್ಣೂರು ಜಿಲ್ಲೆ ಎಂದು, ಇನ್ನೊಬ್ಬನು ತಾನು ರಾಜೇಶ್ ಎನ್.ಕೆ., ಬಿನ್: ನಾಣಿ ನಡುವಲಿಕಂಡಿ ಹೌಸ್, ಅಂಚೆ ಪೊನ್ನಿಯಾಮ್ ವೆಸ್ಟ್, ತಲಚೇರಿ ತಾಲ್ಲೂಕು, ಕಣ್ಣೂರು ಜಿಲ್ಲೆ, ಕೇರಳ ಎಂದು ತಿಳಿಸಿರುತ್ತಾರೆ. ಲಾರಿಯಲ್ಲಿ ಏನಿದೆ ಎಂದು ಕೇಳಲು ಅವರು ಸಮರ್ಪಕವಾದ ಉತ್ತರವನ್ನು ನೀಡದಿರುವುದರಿಂದ ಲಾರಿಯ ಮೇಲೆ ಮುಚ್ಚಿದ್ದ ಪ್ಲಾಸ್ಟಿಕ್‌ನ್ನು ಬಿಡಿಸಿ ನೋಡಲಾಗಿ ಪ್ಲಾಸ್ಟಿಕ್ ಕ್ರೇಟಿನಲ್ಲಿ ಮಂಜುಗಡ್ಡೆ ಮತ್ತು ಕೊಳೆತ ಮೀನು ಇದ್ದು ಸದ್ರಿ ಕ್ರೇಟುಗಳನ್ನು ಕೆಳಗಿಳಿಸಿ ನೋಡಲಾಗಿ ವಾಹನದ ತಳಭಾಗದಲ್ಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ಸದ್ರಿ ಕ್ಯಾನುಗಳಲ್ಲಿ ಮದ್ಯಸಾರ ಇರುವುದು ಕಂಡುಬಂದಿದ್ದು ಅವುಗಳು 35 ಲೀ ಸಾಮರ್ಥ್ಯದ 60 ಕ್ಯಾನುಗಳಲ್ಲಿದ್ದು ಒಟ್ಟು 2100 ಲೀಟರು ಮದ್ಯಸಾರವಿರುತ್ತದೆ. ವಿಚಾರಿಸಲಾಗಿ ಆತನಲ್ಲಿ ಮದ್ಯಸಾರದ ಸಾಗಾಣಿಕೆಗೆ ಯಾವುದೇ ರಹದಾರಿ ಇರಲಿಲ್ಲ ಇದನ್ನು ಕೇರಳಕ್ಕೆ ಸಾಗಿಸುತ್ತಿರುವುದಾಗಿ ಒಪ್ಪಿರುತ್ತಾರೆ. ಈ ಸಮಯದಲ್ಲಿ ವಾರೆಂಟ್‌ನ್ನು ನ್ಯಾಯಾಲಯದಿಂದ ಪಡೆಯಲು ಸಾಧ್ಯವಿಲ್ಲದ್ದರಿಂದ ಸರ್ಚ್ ಮೆಮೋವನ್ನು ತಯಾರಿಸಿ ಇಲಾಖೆಯವರನ್ನೇ ಪಂಚರನ್ನಾಗಿಸಿ ಪ್ರತಿ ಕ್ಯಾನಿನಿಂದ 180 ಮಿಲಿ ಮದ್ಯಸಾರವನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳಿಗೆ ಗುರುತಿನ ಚೀಟಿಗಳನ್ನು ಅಂಟಿಸಿ ಎಲ್ಲಾ ಕ್ಯಾನುಗಳಿಗೂ ಸೀಲು ಮಾಡಿ ಅವುಗಳಿಗೆ ಕ್ರಮ ಸಂಖ್ಯೆಯನ್ನು ನೀಡಿ, ಈ ಕ್ಯಾನುಗಳಿಗೆ ಮುಚ್ಚಿದ್ದ ಕ್ರೇಟ್‌ಗಳನ್ನು ಪರಿಶೀಲಿಸಲು 40 ಕ್ರೇಟುಗಳನ್ನು ಜಪ್ತಿ ಗೊಳಿಸಿ ಲಾರಿಯನ್ನು ಪರಿಶೀಲಿಸಲಾಗಿ ಅದರ ಸಂಖ್ಯೆ: ಕೆಎಲ್-13 ಬಿ-8156 ಚಾಸಿಸ್ ಸಂಖ್ಯೆ:ಎಸ್.ಕೆ.ಝಡ್‌ಜಿಎಲ್-4-ಜಿಎಂ-0055 ಇಂಜಿನ್ ಸಂಖ್ಯೆ: ಎಸ್‌ಎಲ್‌ಸಿಕೆಎಸ್-48305 ಮೊಡೆಲ್ ಸಂಖ್ಯೆ: ಝಡ್ ಟಿ 54 ಇದ್ದು ಸ್ವರಾಜ್ ಮಜ್ದಾ ಕಂಪನಿಯ ಮಿನಿ ಲಾರಿಯಾಗಿರುತ್ತದೆ. ವಿಚಾರಿಸಲಾಗಿ ಚಾಲಕ ಜೈಸನ್ ಕ್ಲೇವಿಯರ್, ಸದ್ರಿ ವಾಹನದ ಮಾಲೀಕನೆಂದು ತಿಳಿದು ಬಂದಿರುತ್ತದೆ. ನಂತರ ದೊರೆತ 60 ಕ್ಯಾನು ಮದ್ಯಸಾರ, 40 ಪ್ಲಾಸ್ಟಿಕ್ ಕ್ರೇಟುಗಳಿದ್ದು ಅವುಗಳಲ್ಲಿದ್ದ ಮಂಜುಗಡ್ಡೆ ಮತ್ತು ಮೀನನ್ನು ನಾಶಪಡಿಸಿ ಕ್ರೇಟುಗಳನ್ನು ವಾಹನದ ಸಹಿತ ಸ್ಥಳ ಮಹಜರಿನೊಂದಿಗೆ ಜಪ್ತಿ ಮಾಡಿ ಅಪರಾಧಿಗಳನ್ನು ದಸ್ತಗಿರಿ ಮಾಡಲಾಯಿತು ಮತ್ತು ಕಚೇರಿಗೆ ಬಂದು ಅಬಕಾರಿ ಕಾಯ್ದೆ ಕಲಂ 11,.14,2ರ ರೀತ್ಯಾ ಅಪರಾಧವಾಗಿದ್ದು ಕಲಂ 32, 34 ಮತ್ತು 38 ಎ ಪ್ರಕಾರ ಶಿಕ್ಷಾರ್ಹವಾಗಿದ್ದು ತಕ್ಷೀರು ಸಂಖ್ಯೆ: 1/2002-03 ದಿ:21.11.2002ರ ಮೂಲಕ ಮೊಕದ್ದಮೆಯನ್ನು ದಾಖಲಿಸಿ ಪ್ರ.ಮಾ. ವರದಿಯನ್ನು ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೂ ಸಲ್ಲಿಸಿ ಪ್ರಾಧಿಕಾರದ ಅನುಮತಿ ಮೇರೆಗೆ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಕೂಳೂರು ಇವರಿಗೆ ಹಸ್ತಾಂತರಿಸಿರುತ್ತಾರೆ.

ಜಪ್ತಿ ಪಡಿಸಲಾಗಿದ್ದ ಮದ್ಯಸಾರದ ಮಾದರಿಗಳನ್ನು ರಾಸಾಯನಿಕ ತಜ್ಞರ ವಿಶ್ಲೇಷಣೆಗಾಗಿ ಒಳಪಡಿಸಿದ್ದು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯಸಾರದ ತೀಕ್ಷ್ಣತೆ $42^{\circ}$ ಒಪಿಯಿದ್ದು ಮದ್ಯಸಾರವನ್ನು ಸಂರಕ್ಷಿಸಲು ಅವಶ್ಯವಾದ ಅನುಕೂಲತೆಯಿಲ್ಲದಿರುವುದರಿಂದ ಸದ್ರಿ ಮದ್ಯಸಾರವು ಮಾನವಸೇವನೆಗೆ ಯೋಗ್ಯವಾಗಿದ್ದುದರಿಂದ, ಸದ್ರಿ ಮದ್ಯಸಾರವನ್ನು ಈ ಪ್ರಾಧಿಕಾರವು ಸಾರಾಯಿ ಸಂಸ್ಕರಣಾ ಘಟಕಕ್ಕೆ ಸಾರಾಯಿ ತಯಾರಿಕೆಗಾಗಿ ಹಂಚಿಕೆ ಮಾಡಲಾಗಿರುತ್ತದೆ. ಈ ವಾಹನದ ಚಾಲಕರೇ ವಾಹನದ ಮಾಲೀಕರಾಗಿದ್ದು ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರವು ದಿನಾಂಕ: 2-1-2002 ರಂದು ನೀಡಿರುತ್ತದೆ. ಈ ಪ್ರಕರಣದಲ್ಲಿ ಜಪ್ತಿಪಡಿಸಲಾದ ವಾಹನದ ಮಾಲೀಕರು ತನ್ನ ವಕೀಲರ ಮುಖಾಂತರ ವಾಹನದ ಮಧ್ಯಂತರ ಬಿಡುಗಡೆಗಾಗಿ ದಿನಾಂಕ:4.2.2002 ರಂದು ಅರ್ಜಿಯನ್ನು ಸಲ್ಲಿಸಿದ್ದು ಅರ್ಜಿದಾರರ ಅರ್ಜಿಯನ್ನು ತಿರಸ್ಕರಿಸಿ ಈ ಪ್ರಾಧಿಕಾರವು ಆದೇಶವನ್ನು ದಿನಾಂಕ: 3.4.2002 ರಂದು ಹೊರಡಿಸಿರುತ್ತದೆ. ಈ ಪ್ರಾಧಿಕಾರದ ಆದೇಶದ ವಿರುದ್ಧ ವಾಹನ ಮಾಲೀಕರು ಮಾನ್ಯ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು ಸತ್ರ ನ್ಯಾಯಾಲಯವು ರೂ.50,000/- ಗಳ ಬ್ಯಾಂಕ್ ಗ್ಯಾರೆಂಟಿ ನೀಡುವ ಷರತ್ತಿನೊಂದಿಗೆ ವಾಹನದ ಬಿಡುಗಡೆಗೆ ಆದೇಶ ನೀಡಿದ್ದು ಸದ್ರಿ ಸತ್ರ ನ್ಯಾಯಾಲಯದ ಆದೇಶದ ವಿರುದ್ಧ ವಾಹನ ಮಾಲೀಕರು ರಾಜ್ಯ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು ಬ್ಯಾಂಕ್ ಗ್ಯಾರೆಂಟಿ ಮೊತ್ತವನ್ನು ರೂ.25,000/- ಗಳಿಗೆ ಇಳಿಸುವಂತೆ ಕೋರಿದ್ದು ಮಾನ್ಯ ಉಚ್ಚ ನ್ಯಾಯಾಲಯವು ಮೇಲ್ಮನವಿದಾರರ ಮನವಿಯನ್ನು ಖುಲಾಸೆ ಮಾಡಿರುತ್ತದೆ.

ಈ ಮಧ್ಯೆ ಜಪ್ತುಪಡಿಸಲಾಗಿರುವ ಲಾರಿಯನ್ನು ಖರೀದಿಸಲು ಹಣ ಸಾಲ ನೀಡಲಾಗಿದ್ದ ಶ್ರೀ ರಾಮ್ ಇನ್‌ವೆಸ್ಟ್‌ಮೆಂಟ್ ಸಂಸ್ಥೆಯಿಂದ ಅಧಿಕಾರ ಪಡೆದ ಶ್ರೀ ಹರಿಕಿರಣ್ ಇವರು ತನ್ನ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ದಿನಾಂಕ:

14.8.2003 ರಂದು ನೀಡಿ ಲಾರಿಯನ್ನು ಖರೀದಿಸಲು ರೂ.7,42,125/- ಗಳ ಹಣವನ್ನು ಸಾಲವಾಗಿ ಒದಗಿಸಿದ್ದು ಒಪ್ಪಂದದ ಪ್ರಕಾರ ತಾವು ಲಾರಿಯ ಮಾಲೀಕರೆಂದು ವಾಹನವನ್ನು ತಮ್ಮ ಸುಪರ್ದ ತಾತ್ಕಾಲಿಕವಾಗಿ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ನಂತರ ಪ್ರಕರಣದ ತನಿಖೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಮೂರು ಸಾಕ್ಷಿಗಳನ್ನು ಪ್ರತಿರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1) ದಿನಾಂಕ: 21.11.2002 ರಂದು ವಾಹನ ಲಾರಿ ಸಂ: ಕೆಎಲ್-13-ಬಿ-8156 ರಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿ ಮಾಡಲಾಗಿತ್ತೇ?
2) ವಶಪಡಿಸಿಕೊಂಡಿರುವ ವಾಹನದ ಮಾಲೀಕ ತಾನೆಂದು ಮತ್ತು ತನಗೆ ತಿಳಿಯದೇ ಅಕ್ರಮ ಮದ್ಯಸಾರದ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತೇ? ನೊಂದಾವಣಿ ಮಾಲೀಕರಿಗೆ ಸಾಲ ನೀಡಿದ ಸಂಸ್ಥೆಯು ಕೇಳಿಕೊಂಡಿರುವಂತೆ ಸದ್ರಿ ವಾಹನವನ್ನು ಸಂಸ್ಥೆಯ ಪರವಾಗಿ ಬಿಡುಗಡೆಗೊಳಿಸಲು ಕಾನೂನಿನಂತೆ ಅವಕಾಶವಿದೆಯೇ?
3) ಜಪ್ತಿ ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-1:**

ಶ್ರೀಮತಿ ಪ್ರೇಮ ಉಡ್ವೀಕರ್, ಅಬಕಾರಿ ನಿರೀಕ್ಷಕರು, ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 14.8.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ದಿನಾಂಕ: 21.11.02 ರಂದು ಮುಂಜಾನೆ 5-00 ಗಂಟೆಗೆ ರಾಷ್ಟ್ರೀಯ ಹೆದ್ದಾರಿ 17ರಲ್ಲಿ ಕುಂಟಿಕಾನದ ಬಳಿ ರಸ್ತೆಗಾವಲು ನಡೆಸುತ್ತಿದ್ದಾಗ ಕೊಟ್ಟಾರ ಕಡೆಯಿಂದ ಕೆ.ಪಿ.ಟಿ ಕಡೆಗೆ ಒಂದು ವಾಹನ ಬರುತ್ತಿದ್ದು ವಾಹನವನ್ನು ತಡೆದು ನಿಲ್ಲಿಸಿ ವಿಚಾರಿಸಲು ವಾಹನದಲ್ಲಿ ಇಬ್ಬರು ವ್ಯಕ್ತಿಗಳಿದ್ದು ಚಾಲಕನ ಹೆಸರು ಜೈಸನ್ ಕ್ಲೇವಿಯರ್, ಮತ್ತೊಬ್ಬ ರಾಜೇಶ್ ಎಂದು ತಿಳಿಸಿರುತ್ತಾರೆ. ಲಾರಿಯಲ್ಲಿ ಏನಿದೆ ಎಂದು ಕೇಳಲು ಸಮರ್ಪಕವಾದ ಉತ್ತರವನ್ನು ನೀಡದೆ ಇದ್ದುದರಿಂದ ವಾಹನದ ಪ್ಲಾಸ್ಟಿಕ್ ತೆಗೆದು ನೋಡಲಾಗಿ ಅದರಲ್ಲಿ ಕ್ರೇಟುಗಳಿದ್ದು ಸದ್ರಿ ಕ್ರೇಟುಗಳಲ್ಲಿ ಕೊಳೆತ ಮೀನು ಇದ್ದು ಸದ್ರಿ ಕ್ರೇಟುಗಳನ್ನು ಕೆಳಗಿಳಿಸಿ ನೋಡಲಾಗಿ ಅಡಿಯಲ್ಲಿ 35 ಲೀಟರು ಸಾಮರ್ಥ್ಯದ ಬಿಳಿ ಪ್ಲಾಸ್ಟಿಕ್ ಕ್ಯಾನ್‌ಗಳಿರುವುದು ಕಂಡುಬಂದಿರುತ್ತದೆ. ಅವುಗಳಲ್ಲಿ ಮದ್ಯಸಾರವಿರುವುದು ಕಂಡು ಬಂದಿದ್ದು ಮದ್ಯಸಾರವನ್ನು ಸಾಗಿಸಲು ಯಾವುದೇ ಪರವಾನಿಗೆಯನ್ನು ಕೇಳಲು ಆತನಲ್ಲಿ ಯಾವುದೇ ಪರವಾನಿಗೆಯಿರಲಿಲ್ಲ. ಒಟ್ಟು 60 ಕ್ಯಾನುಗಳಿದ್ದು ಪ್ರತಿಯೊಂದರಲ್ಲಿ 35 ಲೀಟರು ಮದ್ಯಸಾರವಿರುವುದು ಕಂಡುಬಂದಿರುತ್ತದೆ ಎಂದು ತಿಳಿಸಿರುತ್ತಾರೆ. ನಂತರ ಸ್ಥಳದಲ್ಲಿ ಮಹಜರು ಜರುಗಿಸಿ ಆರೋಪಿಯ ವಿಳಾಸವನ್ನು ವಿಚಾರಿಸಲಾಗಿ ಆತನು ತನ್ನ ಹೆಸರು ಜೈಸನ್ ಕ್ಲೇವಿಯರ್, ಬಿನ್: ಕ್ಲೇವಿಯರ್, 27 ವರ್ಷ ತಾಜೆಯತ್ ಹೌಸ್ ವಯಾ ಪಯನ್ನೂರು ತಾಲಿಪರಂಬು ತಾಲ್ಲೂಕು, ಕಣ್ಣೂರು ಜಿಲ್ಲೆ ಹಾಗೂ ಕ್ಲೀನರ್ ತನ್ನ ಹೆಸರು ರಾಜೇಶ್ ಬಿನ್: ನಾಣಿ ಪ್ರಾಯ :26 ವರ್ಷ, ನಡುವಲಿಕುಡಿ ಹೌಸ್ ಪೊನ್ನಿಯಮ್ಮ ವೆಸ್ಟ್ ತಲಚೇರಿ ತಾಲ್ಲೂಕು, ಕಣ್ಣೂರು ಜಿಲ್ಲೆ ಎಂದು ತಿಳಿಸಿರುತ್ತಾರೆ. ಸದ್ರಿ ವಾಹನವನ್ನು ತಪಾಸಣೆ ಮಾಡುವ ಮೊದಲು ನ್ಯಾಯಾಲಯದ ಅನುಮತಿ ಪಡೆಯಲು ಸಮಯಾವಕಾಶವಿಲ್ಲದ ಕಾರಣ ಸರ್ಚ್ ಮೆಮೋ ತಯಾರಿಸಿರುವುದಾಗಿ ತಿಳಿಸಿರುತ್ತಾರೆ. ಆರೋಪಿಗಳ ವಿಳಾಸವಿರುವ ಗುರುತಿನ ಚೀಟಿಗಳನ್ನು ತಯಾರಿಸಿ ಕ್ರೇಟ್‌ಗಳಿಗೂ, ಕ್ಯಾನುಗಳಿಗೂ ಅಂಟಿಸಲಾಯಿತು. ಸ್ಥಳದಲ್ಲಿ ಲಾರಿ ಮತ್ತು ಸ್ವತ್ತುಗಳನ್ನು ವಶಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿ ಮಾಡಿದೆವು. ಸದ್ರಿ ಸ್ವತ್ತುಗಳನ್ನು ಕಛೇರಿಗೆ ತೆಗೆದುಕೊಂಡು ಬಂದು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಲ್ಲಿಸಿದೆನು. ಮುಂದಿನ ತನಿಖೆಗಾಗಿ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಕೂಳೂರು ಇವರಿಗೆ ಒಪ್ಪಿಸಿರುವುದಾಗಿ ತಿಳಿಸಿರುತ್ತಾರೆ. ಪ್ರಕರಣದಲ್ಲಿ ಸ್ವತ್ತುಗಳನ್ನು ವಶಪಡಿಸಿಕೊಂಡ ಬಗ್ಗೆ ಕಲಂ 43 (ಎ) ವರದಿಯನ್ನು ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಿರುತ್ತೇನೆ. ಪ್ರ.ಮಾ.ವರದಿಯ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-1 ಎಂದೂ ಮಹಜರು ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-2 ಎಂದೂ ಕಲಂ 43 (ಎ) ಅಡಿಯ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-3 ಎಂದೂ ಗುರುತಿಸಲಾಯಿತು. ಈ ಪ್ರಕರಣದ ಮಾದರಿ ಶೀಷೆಗಳನ್ನು ಅಬಕಾರಿ ಮುಖ್ಯ ರಕ್ಷಕ ಶ್ರೀ ರಮೇಶ್ ಇವರ ಮೂಲಕ ರಾಸಾಯನಿಕ ತಜ್ಞರಿಗೆ ಕಳುಹಿಸಿರುತ್ತೇನೆ. ರಾಸಾಯನಿಕ ತಜ್ಞರ ವರದಿಯನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿದೆ. ರಾಸಾಯನಿಕ ತಜ್ಞರಿಂದ ಸ್ವೀಕರಿಸಿದ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಸದ್ರಿ ವರದಿಯ ಪ್ರಕಾರ ರಾಸಾಯನಿಕ ಪರೀಕ್ಷೆಗಾಗಿ 60 ಬಾಟ್ಲಿಗಳಲ್ಲಿ ಮಾದರಿಯನ್ನು ತೆಗೆದಿರುವುದು ಕಂಡು ಬಂದಿರುತ್ತದೆ. ಮದ್ಯಸಾರವನ್ನು ಸಾರಾಯಿ ಸಂಸ್ಕರಣಾ ಘಟಕಕ್ಕೆ ಹಸ್ತಾಂತರಿಸಿರುತ್ತೇನೆ. ನಾವು ವಶಪಡಿಸಿಕೊಂಡ ವಾಹನ ಮಾಲೀಕ ಚಾಲಕನೇ ಇರುತ್ತಾನೆಂದು ಗೊತ್ತಾಯಿತು ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ನಾವು ಅವಶ್ಯವಿದ್ದಲ್ಲಿ 24 ಗಂಟೆಯೂ ಕೆಲಸ ನಿರ್ವಹಿಸಬೇಕಾಗುತ್ತದೆ. ಈ ದಿನ ನಾವು ನಮ್ಮ ಇಲಾಖೆಯ ಜೀಪಿನಿಂದ ಹೊರಟು ಕೊಟ್ಟಾರ ಚೌಕಿಯಲ್ಲಿ ಕರ್ತವ್ಯ ನಿರ್ವಹಿಸಿ ತಕ್ಷೀರಿನ ಸ್ಥಳಕ್ಕೆ 4-45ಕ್ಕೆ ಬಂದಿರುತ್ತೇವೆ. ಸದ್ರಿ ಸ್ಥಳವು ರಾಷ್ಟ್ರೀಯ ಹೆದ್ದಾರಿ ಎಂದರೆ ಸರಿ ಇದಕ್ಕೂ ಮುಂಚೆ ಕೆಲವು ಸಂಶಯವಿದ್ದ ವಾಹನಗಳನ್ನು ತಪಾಸಣೆ ಮಾಡಿರುತ್ತೇವೆ. ನಾವು ರಸ್ತೆಯ ಎಡಬದಿಯಲ್ಲಿ ನಿಂತಿದ್ದೆವು. ಅಬಕಾರಿ ರಕ್ಷಕ ಪ್ರಕಾಶ್ ಕುಮಾರ್ ವಾಹನವನ್ನು ನಿಲ್ಲಿಸಿರುತ್ತಾರೆ. ಸದ್ರಿ ವಾಹನ ಟಾರ್ಪಾಲಿನ್ ತೆಗೆದು ನಮ್ಮ ಸಿಬ್ಬಂದಿಯವರು ವಾಹನವನ್ನು ಪರಿಶೀಲಿಸಿರುತ್ತಾರೆ. ಆ ಪ್ರಕರಣದಲ್ಲಿ ಸರ್ಚ್ ಮೆಮೋ ತಯಾರಿಸಿರುತ್ತೇನೆ. ಪಂಚನಾಮೆ ತಯಾರಿಸಿರುತ್ತೇನೆ. ನಮ್ಮ ಸಿಬ್ಬಂದಿಯವರು ಸಾಕ್ಷಿದಾರರನ್ನು ಕರೆದರು, ಆದರೆ ಯಾರು ಬರಲಿಲ್ಲ

ವಾಹನದಲ್ಲಿದ್ದ ಕೊಳೆತ ಮೀನನ್ನು ಬೇರೆ ರೀತಿ ವಿಲೇವಾರಿ ಮಾಡುವ ಕುರಿತು ತನಗೆ ಯಾವುದೇ ಯೋಚನೆ ಬರಲಿಲ್ಲ. ಈ ಕುರಿತು ಮಹಾನಗರ ಪಾಲಿಕೆಗೆ ತಿಳಿಸಿಲ್ಲ. ನಾನು ಆದಿನ ಸ್ಥಳಕ್ಕೆ ಹೋಗಿಲ್ಲ ಎಂದರೆ ಸರಿಯಲ್ಲ. ಪ್ರಕರಣದ ದಾಖಲೆಗಳನ್ನು ಕಛೇರಿಯಲ್ಲಿ ತಯಾರಿಸಿರುತ್ತೇನೆ ಮತ್ತು ಆರೋಪಿಯನ್ನು ತಕ್ಷೀರು ಸ್ಥಳದಲ್ಲಿ ಬಂಧಿಸಿಲ್ಲ ಎಂದರೆ ಸರಿಯಲ್ಲ. ಆ ದಿನದಂದು ಮೀನು ಸರಬರಾಜು ಮಾಡಲು ರಹದಾರಿಯಿಲ್ಲವೆಂದು ಆರೋಪಿಯು ತಿಳಿಸಿರುತ್ತಾನೆ. ಈ ಕಾರಣದಿಂದ ಸದ್ರಿ ದಿನದಂದು ಮೀನನ್ನು ಮಂಗಳೂರಿನಿಂದ ಕಣ್ಣೂರಿಗೆ ಸಾಗಿಸುತ್ತಿದ್ದನೆಂದರೆ ಸರಿಯಲ್ಲ. ಮಹಜರು ನನ್ನ ಹಸ್ತಾಕ್ಷರದಲ್ಲಿರುತ್ತದೆ. ಆರೋಪಿಯು ತಕ್ಷೀರು ಸ್ಥಳದಲ್ಲಿ ಇರಲಿಲ್ಲ. ಆತನನ್ನು ದೂರವಾಣಿ ಮೂಲಕ ನಮ್ಮ ಕಚೇರಿಗೆ ಕರೆಸಿ ಆತನ ವಿರುದ್ಧ ಸುಳ್ಳು ಪ್ರಕರಣ ದಾಖಲೆ ಮಾಡಿದ್ದೇನೆಂದರೆ ಸರಿಯಲ್ಲ. ಹಿರಿಯ ಅಧಿಕಾರಿಗಳ ಒತ್ತಾಯದ ಮೇರೆಗೆ ಕಛೇರಿಯಲ್ಲಿ ದಾಖಲೆಗಳನ್ನು ಸೃಷ್ಟಿಸಿ ಸುಳ್ಳು ಮೊಕದ್ದಮೆ ದಾಖಲಿಸಿರುತ್ತೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಶ್ರೀರಾಮ್ ಇನ್‌ವೆಸ್ಟ್‌ಮೆಂಟ್ ಸಂಸ್ಥೆಯ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಕ್ಷೀರು ಸ್ಥಳದಲ್ಲಿ ವಾಹನಕ್ಕೆ ಸಂಬಂಧಿಸಿದ ಆರ್.ಸಿ. ಪುಸ್ತಕ ಇನ್ನಿತರ ಮೂಲ ದಾಖಲೆಗಳನ್ನು ವಶಪಡಿಸಿಕೊಂಡಿರುತ್ತೇನೆ. ವಶಪಡಿಸಿಕೊಂಡ ವಾಹನವು ಶ್ರೀ ರಾಮ್ ಇನ್‌ವೆಸ್ಟ್‌ಮೆಂಟಿಗೆ ಹೈಪಾತಿಕೇಶನ್ ಆಗಿದ್ದ ವಿಷಯ ನನಗೆ ಗೊತ್ತಿಲ್ಲ. ತಕ್ಷೀರು ಸ್ಥಳದಲ್ಲಿ ವಾಹನದ ಚಾಲಕನು ತಾನು ವಾಹನದ ನೋಂದಾಯಿತ ಮಾಲೀಕನೆಂದು ತಿಳಿಸಿರುತ್ತಾನೆ. ಈ ವಾಹನ ಯಾವುದೇ ಕಂಪನಿಗೆ ಹೈಪಾತಿಕೇಶನ್ ಆಗಿದೆಯೇ? ಎಂಬುದಾಗಿ ಯಾವುದೇ ವಿಚಾರಣೆ ಮಾಡಿರುವುದಿಲ್ಲ. ಮತ್ತು ಈ ವಾಹನವು ಶ್ರೀ ರಾಮ್ ಇನ್‌ವೆಸ್ಟ್‌ಮೆಂಟ್ ಸಂಸ್ಥೆಗೆ ಸೇರಿದ್ದು ಎಂದರೆ ಆ ವಿಷಯ ನನಗೆ ಗೊತ್ತಿಲ್ಲ. ನಾನು ಈ ಪ್ರಕರಣದ ದಾಖಲೆಗಳನ್ನು ಪರಿಶೀಲಿಸದೇ ಹೇಳಿಕೆ ನೀಡುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಲ್ಲಿ ವಾಹನ ಮಾಲೀಕರಿಗೆ ಯಾವುದೇ ಪ್ರಯೋಜನ ಆಗಿರುವುದಿಲ್ಲ ಹಾಗೂ ಮುಖ್ಯ ವಿಚಾರಣೆಗೆ ಪೂರಕವಾಗಿ ಸಾಕ್ಷಿಯನ್ನು ನೀಡಿರುತ್ತಾರೆ.

**ಪ್ರಾ.ಸಾ-2:**

ಶ್ರೀ ಚಂದ್ರಶೇಖರ, ಅಬಕಾರಿ ನಿರೀಕ್ಷಕರು, ಕೂಳೂರು ವಲಯ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು ದಿ:28.8.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನೀಡಿರುತ್ತಾರೆ. ದಿ: 18.12.02 ರಂದು ಪ್ರಕರಣದ ಸ್ವತ್ತು ಹಾಗೂ ದಾಖಲಾತಿಗಳನ್ನು ಪಡೆದುಕೊಂಡಿರುತ್ತೇನೆ. ಅಧಿಕೃತ ಅಧಿಕಾರಿಗಳ ಆದೇಶದಂತೆ ವಶಪಡಿಸಿದ್ದ ಕ್ಯಾನುಗಳನ್ನು ಕ್ರೇಟುಗಳನ್ನು ಬಹಿರಂಗವಾಗಿ ಹರಾಜು ಮೂಲಕ ವಿಲೇವಾರಿ ಮಾಡಿರುತ್ತೇನೆ. ಈ ಪ್ರಕರಣದ ತನಿಖೆ ಪೂರ್ಣಗೊಳ್ಳದೆ ದೋಷಾರೋಪಣೆ ಪಟ್ಟಿ ಸಲ್ಲಿಸಲು ಬಾಕಿಯಿದೆ ಎಂದು ತಿಳಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣದಲ್ಲಿ ಯಾವುದೇ ಸಾಕ್ಷಿದಾರರ ಹೇಳಿಕೆ ಪಡೆದಿರುವುದಿಲ್ಲ. ತಕ್ಷೀರಿಗೆ ಸಂಬಂಧಪಟ್ಟ ಘಟನೆಯನ್ನು ನಾನು ನೋಡಿಲ್ಲ ವಾಹನಕ್ಕೆ ಸಂಬಂಧಿಸಿದ ಆರ್.ಸಿ. ಪುಸ್ತಕ ನಮ್ಮಲ್ಲಿದೆ. ಈ ಪ್ರಕರಣದಲ್ಲಿ ನಾನು ಸರಿಯಾಗಿ ತನಿಖೆ ಮಾಡದೆ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಪ್ರಕರಣದಲ್ಲಿ ಮದ್ಯಸಾರವನ್ನು ವಶಪಡಿಸಿಕೊಂಡಿಲ್ಲವೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಶ್ರೀ ರಾಮ ಇನ್‌ವೆಸ್ಟ್‌ಮೆಂಟ್ ಪರ ವಕೀಲರ ಪಾಟಿ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪಡೆದುಕೊಂಡಿರುತ್ತೇನೆ. ನಾನು ಪಡೆದುಕೊಂಡ ದಾಖಲೆಗಳ ಪ್ರಕಾರ ವಶಪಡಿಸಿಕೊಂಡಿರುವ ವಾಹನ ಶ್ರೀ ರಾಮ್ ಇನ್‌ವೆಸ್ಟ್‌ಮೆಂಟ್, ಸಂಸ್ಥೆಗೆ ಸೇರಿದ್ದು ಎಂದರೆ ನನಗೆ ಗೊತ್ತಿಲ್ಲ ನಾನು ದಾಖಲೆಗಳನ್ನು ಪರಿಶೀಲಿಸಿಲ್ಲವೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

**ಪ್ರಾ.ಸಾ-3:**

ಶ್ರೀ ರಮೇಶ ಅಮೀನ್, ಅಬಕಾರಿ ರಕ್ಷಕ, ಗುಪ್ತ ವಾರ್ತಾದಳ, ಮಂಗಳೂರು ಇವರು ದಿ: 16.10.03 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ತಾನು ದಿ: 25.11.2002 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 180 ಮಿಲಿಯ 60 ಮಾದರಿ ಬಾಟ್ಲಿಗಳನ್ನು, ಕೋರಿಕೆ ಪತ್ರ ಹಾಗೂ ಮಾದರಿ ಸೀಲು ಇವುಗಳನ್ನು ಗುಪ್ತ ವಾರ್ತಾದಳದ ಅಬಕಾರಿ ನಿರೀಕ್ಷಕರಿಂದ ಪಡೆದುಕೊಂಡು ರಾಸಾಯನಿಕ ತಜ್ಞರಲ್ಲಿಗೆ ಸಲ್ಲಿಸಿರುತ್ತೇನೆ. ಅದೇ ದಿನ ತಜ್ಞರಿಂದ ಮಾದರಿ ಶೀಷೆ ಹಾಗೂ ವರದಿಯನ್ನು ಪಡೆದು ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ. ತಜ್ಞರ ವರದಿಯನ್ನು ನೋಡಿದೆನು, ಅದನ್ನು ಈಗಾಗಲೇ ನಿಶಾನೆ ಪಿ-4 ಎಂದು ಗುರುತಿಸಲಾಗಿದೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣದಲ್ಲಿ ಮಾದರಿ ಶೀಷೆಗಳನ್ನು ನಮ್ಮ ಕಾರ್ಯಾಲಯದಿಂದ 10.30 ಗಂಟೆಗೆ ಪಡೆದುಕೊಂಡು ಹೋಗಿರುತ್ತೇನೆ. ಅದೇ ದಿನ ಸಂಜೆ 5-30 ಗಂಟೆಗೆ ಪರೀಕ್ಷಿಸಿದ ಮಾದರಿ ಶೀಷೆಗಳನ್ನು ಮರಳಿ ತಂದಿರುತ್ತೇನೆ. ಈ ಪ್ರಕರಣದಲ್ಲಿ ಈ ಬಾಟ್ಲಿಗಳನ್ನು ಮಾತ್ರ ಕೊಂಡೊಯ್ದಿರುತ್ತೇನೆ. 25.11.02ರ ಮೊದಲು ಈ ಪ್ರಕರಣಕ್ಕೆ ಸಂಬಂಧಿಸಿದ ಘಟನೆ ನನಗೆ ಗೊತ್ತಿಲ್ಲ. ನಾನು ಈ ಪ್ರಕರಣದಲ್ಲಿ ಮಾದರಿ ಶೀಷೆಗಳನ್ನು ತಜ್ಞರಿಗೆ ಕೊಂಡೊಯ್ದಿರುವುದಿಲ್ಲ ಹಾಗೂ ತಜ್ಞರು ಯಾವುದೇ ವರದಿಯನ್ನು ಕೊಟ್ಟಿಲ್ಲವೆಂದರೆ ಸರಿಯಲ್ಲ. ನಾವೇ ಅವುಗಳನ್ನು ಕಛೇರಿಯಲ್ಲಿ ತಯಾರಿಸಿರುತ್ತೇವೆ ಎಂದರೆ ಹಾಗೂ ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಪ್ರಾ.ಸಾ. 1 ರಿಂದ 3 ರವರೆಗಿನ ಸಾಕ್ಷಿಗಳು ಪ್ರಕರಣಕ್ಕೆ ಪೂರಕವಾಗಿ ಸಾಕ್ಷಿ ನೀಡಿದ್ದು ಮೊದಲನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿರುತ್ತೇನೆ.

**ಡಿ.ಡಬ್ಲ್ಯೂ 1:**

ಶ್ರೀ ಜೈಸನ್ ಕ್ಲೇವಿಯರ್ ಈ ಪ್ರಕರಣದಲ್ಲಿ ಜಪ್ತಿ ಪಡಿಸಿರುವ ವಾಹನದ ಆರ್.ಸಿ. ಮಾಲೀಕನಾಗಿದ್ದು ದಿ: 20.11.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ನನಗೆ ಸ್ವರಾಜ್ ಮಜ್ದಾ ವಾಹನವಿದ್ದು ಅದರ ನೊಂದಣಿ ಸಂಖ್ಯೆ: ಕೆಎಲ್-13

ಬಿ-8156 ಆಗಿರುತ್ತದೆ. ಅದನ್ನು ಅಕ್ಟೋಬರ್-2001 ರಲ್ಲಿ ಖರೀದಿಸಿರುತ್ತೇನೆ. ಮೀನು ದೊರಕುವ ಸಮಯ ಮಂಗಳೂರಿನಿಂದ ಮೀನನ್ನು ಎರ್ನಾಕುಳಂಗೆ ತೆಗೆದುಕೊಂಡು ಹೋಗುತ್ತೇನೆ. ನನಗೆ ಡ್ರೈವಿಂಗ್ ಅನುಭವವಿದ್ದು ಘನ ವಾಹನಗಳನ್ನು ಚಲಾಯಿಸಲು ಡ್ರೈವಿಂಗ್ ಲೈಸನ್ಸ್ ಇಲ್ಲ, ರಾಜೇಶ್ ಎಂಬುವರು ಮಂಗಳೂರಿಗೆ ತರುತ್ತಾರೆ. ನಾನು ಗುತ್ತಿಗೆ ಆಧಾರದ ಮೇಲೆ ಮಂಗಳೂರಿನಿಂದ ಎರ್ನಾಕುಳಂಗೆ ಮೀನನ್ನು ಸಾಗಾಟ ಮಾಡುತ್ತೇನೆ. ದಿ:20.11.2002 ರಂದು ಸಂಜೆ ನನ್ನ ಚಾಲಕನು ಕಣ್ಣಾನೂರಿನಿಂದ ಮಂಗಳೂರಿಗೆ ತಂದಿರುತ್ತಾನೆ. ಮರುದಿನ ಬೆಳಿಗ್ಗೆ 7-00 ಗಂಟೆಗೆ ನನ್ನ ಮನೆಯ ಹತ್ತಿರವಿರುವ ಜೇಮ್ಸ್ ಎಂಬವರ ಅಂಗಡಿಗೆ ದೂರವಾಣಿ ಕರೆ ಬಂದಿದ್ದು ಅದನ್ನು ಅಂಗಡಿಯ ಕೆಲಸದವರು ಬಂದು ನನ್ನಲ್ಲಿ ಹೇಳಿದರು. ನನ್ನ ಚಾಲಕನು ವಾಹನದ ಎಲ್ಲಾ ಒರಿಜಿನಲ್ ದಾಖಲೆಗಳ ಸಮೇತ ನೀವು ಮಂಗಳೂರಿನ ಬಿಜೈ ಗುಪ್ತವಾರ್ತಾದಳ ಕಛೇರಿಗೆ ಬರಬೇಕೆಂದು ಹೇಳಿದರು 7-30ಕ್ಕೆ ಹೊರಟು 12-00 ಗಂಟೆಗೆ ಮಂಗಳೂರನ್ನು ಸೇರಿದೆನು. ನಾನು ಬರುವಾಗ ವಾಹನವನ್ನು ಬಿಜೈ ಗುಪ್ತ ವಾರ್ತಾದಳದ ಕಛೇರಿಯಲ್ಲಿ ನಿಲ್ಲಿಸಿದ್ದರು. ಕಚೇರಿಯಲ್ಲಿ ನನ್ನನ್ನು ವಿಚಾರಿಸಿ ಒರಿಜಿನಲ್ ದಾಖಲೆ ಪತ್ರಗಳನ್ನು ವಶಪಡಿಸಿಕೊಂಡಿರುತ್ತಾರೆ. ಆಮೇಲೆ ಕನ್ನಡದಲ್ಲಿ ಬರೆದು ಕಾಗದಕ್ಕೆ ನನ್ನ ಸಹಿಯನ್ನು ಪಡೆದಿರುತ್ತಾರೆ ಹಾಗೂ ವಾಹನದ ಮುಂದೆ ನನ್ನನ್ನು, ಚಾಲಕ ರಾಜೇಶ್‌ನನ್ನು ಮೀನು ತುಂಬಿಸುವ ಟ್ರೇ ಇಟ್ಟು, ಕೆಲವು ಅಧಿಕಾರಿಗಳ ಎದುರಿನಲ್ಲಿ ನಮ್ಮನ್ನು ಕುಳ್ಳಿರಿಸಿ ಫೋಟೋ ತೆಗೆದಿರುತ್ತಾರೆ. ಆಮೇಲೆ ನಮ್ಮನ್ನು ನ್ಯಾಯಾಲಯಕ್ಕೆ ಹಾಜರು ಪಡಿಸಿರುತ್ತಾರೆ. ಆಗ ನನ್ನ ಮೇಲೆ ಸಾರಾಯಿ ಸಾಗಾಟದ ಬಗ್ಗೆ ಕೇಸು ದಾಖಲಾಗಿದೆ ಎಂದು ತಿಳಿದು ಬಂತು. ದಿ: 21-11-2002 ರಂದು 7-00 ಗಂಟೆಗೆ ನಾನು ನನ್ನ ಮನೆಯಲ್ಲಿರುತ್ತೇನೆ. ವಾಹನವನ್ನು ಅನಧಿಕೃತ ವಸ್ತುಗಳನ್ನು ಸಾಗಿಸಬಾರದೆಂದು ಚಾಲಕನಿಗೆ ತಿಳಿಸಿರುತ್ತೇನೆ. ನಾನು ಸಾಲ ಮಾಡಿ ಈ ವಾಹನವನ್ನು ಖರೀದಿಸಿರುತ್ತೇನೆ. ದಿ: 21-11-2002 ರಂದು ನಾನು ಈ ವಾಹನದ ಚಾಲಕನಾಗಿರಲಿಲ್ಲ ಮತ್ತು ಈ ಕೇಸಿಗೂ ನನಗೂ ಸಂಬಂಧವಿಲ್ಲ ಎಂದು ತಿಳಿಸಿರುತ್ತಾರೆ.

ಶ್ರೀರಾಮ್ ಇನ್‌ವೆಸ್ಟ್‌ಮೆಂಟ್ ಸಂಸ್ಥೆಯ ಪರ ವಕೀಲರು ಪಾಟೀ ಸವಾಲಿಗೆ ಉತ್ತರಿಸುತ್ತಾ ಶ್ರೀರಾಮ್ ಇನ್‌ವೆಸ್ಟ್‌ಮೆಂಟಿನಿಂದ ಈ ವಾಹನದ ಮೇಲೆ ರೂ.4 ಲಕ್ಷ ಸಾಲ ಪಡೆದಿರುತ್ತೇನೆ. ಕಂತು ಪ್ರಕಾರ ಸ್ವಲ್ಪ ಸ್ವಲ್ಪ ಕಟ್ಟಿರುತ್ತೇನೆ. ಸದ್ರಿ ಕಂಪೆನಿಯ ಮೇಲೆ ಒಪ್ಪಂದವಾಗಿದೆ. ಸದ್ರಿ ಕಂಪೆನಿಗೆ ಕಟ್ಟಬೇಕಾದ ಸಾಲದ ಕಂತನ್ನು ಪೂರ್ತಿಯಾಗಿ ಕಟ್ಟದೇ ಇರುವುದರಿಂದ ಸದ್ರಿ ಲಾರಿಯ ಮಾಲೀಕ ನಾನಲ್ಲ ಎಂದರೆ ಸರಿಯಲ್ಲ. ಸದ್ರಿ ಲಾರಿಯ ಮಾಲೀಕರು ಶ್ರೀರಾಮ್ ಇನ್‌ವೆಸ್ಟ್‌ಮೆಂಟ್ ಕಂಪೆನಿ ಎಂದರೆ ಸರಿಯಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಸಹಾಯಕ ಅಭಿಯೋಗ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ 20-11-2004 ರಂದು ಲಾರಿಯಲ್ಲಿ ಮೀನು ತುಂಬಿಸಲು ಕಣ್ಣಾನೂರಿನಿಂದ ಸಂಜೆ 6-30ಕ್ಕೆ ಹೊರಟಿತ್ತು. ನಾನು ಕಣ್ಣಾನೂರಿನಿಂದ ಮಂಗಳೂರು ತಲುಪಲು 4.30 ಯಿಂದ 5 ಗಂಟೆ ಸಮಯ ಬೇಕಾಗುತ್ತದೆ. ಆ ದಿನ ಲಾರಿಯಲ್ಲಿ 65 ಕ್ರೇಟ್‌ಗಳಿದ್ದವು. ರಾಜೇಶನಿಗೆ ಹೆವಿ ವೆಹಿಕಲ್ ಚಾಲನಾ ಪತ್ರ ಇರುತ್ತದೆ. ಆ ದಿನ ನಾನು ಲಾರಿಯ ಚಾಲಕನಾಗಿದ್ದೆ. ರಾಜೇಶ್ ಸಹಾಯಕನಾಗಿದ್ದ ಎಂದರೆ ಸರಿಯಲ್ಲ. ದಿ: 21.11.2002 ರಂದು ಬೆಳಿಗ್ಗೆ 5-00 ಗಂಟೆಗೆ ನಮ್ಮ ಲಾರಿಯನ್ನು ತಡೆದು ನಿಲ್ಲಿಸಿ, ತಪಾಸಣೆ ಮಾಡಿದ್ದರು ಹಾಗೂ ಅದರಲ್ಲಿ ಸ್ಪಿರಿಟ್ ತುಂಬಿದ್ದ ಕ್ಯಾನ್‌ಗಳಿದ್ದವೆಂದರೆ ಸರಿಯಲ್ಲ ಆ ಸಮಯ ನನ್ನನ್ನು ಮತ್ತು ರಾಜೇಶನನ್ನು ಅಬಕಾರಿ ಅಧಿಕಾರಿಗಳು ಬಂಧಿಸಿದ್ದಾರೆ ಎಂದರೆ ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

**ಡಿಡಬ್ಲ್ಯೂ-2**

ಶ್ರೀ ಜೋನ್ ಬಿನ್: ಮಾರ್ತಿವೋ ಇವರು ಈ ಪ್ರಾಧಿಕಾರದ ಮುಂದೆ ದಿ: 20-11-2003 ರಂದು ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಕೆಲಸ ಮಾಡುವ ಅಂಗಡಿಯ ಹತ್ತಿರ ಜೈಸನ್ ವಾಸವಾಗಿದ್ದು ಅವರ ಪರಿಚಯವಿರುತ್ತದೆ. ಇವರು ಕೆಎಲ್-13ಬಿ-8156 ಸಂಖ್ಯೆಯ ಲಾರಿಯ ಮಾಲೀಕರಾಗಿರುತ್ತಾರೆ. ಸದ್ರಿ ವಾಹನವನ್ನು ತೊಳೆಯಲು ಕೊಂಡು ಹೋಗುವುದನ್ನು ನಾನು ನೋಡಿರುತ್ತೇನೆ. ಅವರಿಗೆ ಡ್ರೈವಿಂಗ್ ಲೈಸನ್ಸ್ ಇರುವುದು ಗೊತ್ತಿಲ್ಲ. ಸೀಸನ್‌ನಲ್ಲಿ ಮಂಗಳೂರಿನಿಂದ ಎರ್ನಾಕುಳಂಗೆ ಮೀನು ಸಾಗಾಟ ಮಾಡುತ್ತಾರೆ. ಅವರಿಗೆ ದೂರವಾಣಿ ಸೌಲಭ್ಯವಿರುವುದಿಲ್ಲ. ಅವರ ಮನೆಗೆ ಬರುವ ದೂರವಾಣಿಗಳು ನಾನು ಕೆಲಸ ಮಾಡುವ ಅಂಗಡಿಗೆ ಬರುತ್ತವೆ. ದಿ: 21.11.2002 ರಂದು ರಾಜೇಶ್ ಎನ್ನುವರು ಜೈಸನ್‌ಗೆ ಫೋನ್ ಮಾಡಿದ್ದರು. ನಾನು ಮಾತನಾಡಿ ಜೈಸನ್ನರಿಗೆ ತಿಳಿಸಿದೆ. ಅವರು ಬಂದು ರಾಜೇಶ್‌ನೊಂದಿಗೆ ಮಾತನಾಡಿದರು. ಅದರ ಬಗ್ಗೆ ವಿಚಾರಿಸಿದಾಗ ಎಲ್ಲಾ ಒರಿಜಿನಲ್ ದಾಖಲೆ ಪತ್ರಗಳನ್ನು ಮಂಗಳೂರಿಗೆ ತೆಗೆದುಕೊಂಡು ಹೋಗಬೇಕಾಗಿ ಜೈಸನ್ನನಿಗೆ ತಿಳಿಸಿರುತ್ತಾರೆ. ನಾನು ತಿಳಿದಿರುವಂತೆ ಅವರ ಮೇಲೆ ಯಾವುದೇ ಮೊಕದ್ದಮೆಯಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ಮಾನ್ಯ ಎಡಿಪಿಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಕೆಲಸ ಮಾಡುವ ಅಂಗಡಿ ಜನರಿಂದ ಕಾಡು ಉತ್ಪನ್ನಗಳನ್ನು ಖರೀದಿಸುವುದು ಆಗಿರುತ್ತದೆ. ಈ ಲಾರಿಯೊಂದಿಗೆ ನಾನು ಹೋಗುವುದಿಲ್ಲ. ಲಾರಿಯು ಪ್ರತಿ ದಿನ ಎಲ್ಲಿಗೆ ಹೋಗುತ್ತದೆ ಎಂದರೆ ನನಗೆ ಗೊತ್ತಿಲ್ಲ ಹಾಗೂ ಇದರ ಆದಾಯ ಎಷ್ಟೆಂದು ಗೊತ್ತಿಲ್ಲ. ದಿ:21.11.2002 ರಂದು 7-00 ಗಂಟೆಗೆ ಜೈಸನ್ ನಮ್ಮ ಅಂಗಡಿಗೆ ಬಂದು ಫೋನಿನಲ್ಲಿ ಮಾತನಾಡಿದ ಎಂದು ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ ಈ ಪ್ರಕರಣದ ವಿಷಯವು ನನಗೆ ಗೊತ್ತಿಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

**ಡಿಡಬ್ಲ್ಯೂ-3**

ಶ್ರೀ ಹರಿಕಿರಣ್, ಬಿನ್; ಜಿ.ಜಿ. ಭಂಡಾರಿ ಕಾನೂನು ಅಧಿಕಾರಿ ಶ್ರೀರಾಮ್ ಇನ್‌ವೆಸ್ಟ್‌ಮೆಂಟ್ ಇವರು ದಿ:20.11.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ನಾನು ಈ ಪ್ರಕರಣದಲ್ಲಿ ಅರ್ಜಿದಾರನಾಗಿರುತ್ತೇನೆ. ಲಾರಿ ಸಂಖ್ಯೆ ಕೆಎಲ್-13ಬಿ-8156ನ್ನು ನಮಗೆ ಬಿಡುಗಡೆ ಮಾಡಬೇಕೆಂದು ಕೋರಿ ಶ್ರೀರಾಮ್ ಇನ್‌ವೆಸ್ಟ್‌ಮೆಂಟ್ ಪರ ಅರ್ಜಿ ಸಲ್ಲಿಸಿರುತ್ತೇನೆ. ನಮ್ಮ ಸಂಸ್ಥೆಯಿಂದ ಜೈಸನ್ ಕ್ಲೇವಿಯರ್ ಇವರಿಗೆ ಸಾಲ ನೀಡಿ ಸದ್ರಿ ಲಾರಿಗೆ ಸಂಬಂಧಿಸಿದಂತೆ ಒಂದು ಲೀಜ್ ಒಪ್ಪಂದ ಮಾಡಲಾಗಿದೆ. ಸದ್ರಿ ಪತ್ರವನ್ನು ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿರುತ್ತೇನೆ. ಪ್ರತಿಯನ್ನು ನೋಡಿದೆ ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ವಾಹನದ ಆರ್.ಸಿ. ಪುಸ್ತಕದ ಛಾಯಾ ಪ್ರತಿಯನ್ನು ಹಾಜರುಪಡಿಸಿದ್ದು ಅದನ್ನು ನಿಶಾನೆ ಡಿ-2 ಎಂದು ಗುರುತಿಸಲಾಯಿತು. ವಾಹನಕ್ಕೆ ಸಂಬಂಧಿಸಿದಂತೆ ಮಾಡಿಕೊಂಡ ಲೀಜ್ ಒಪ್ಪಂದದ ಪ್ರಕಾರ ಆರ್.ಸಿ. ಪುಸ್ತಕದಲ್ಲಿ ನಮೂದಿಸಿದೆ. ಈ ಪ್ರಾಧಿಕಾರದ ಮುಂದೆ ಸಾಕ್ಷಿ

ಹೇಳಲು ಶ್ರೀರಾಮ್ ಇನ್‌ವೆಸ್ಟ್‌ಮೆಂಟ್ ನವರು ನನಗೆ ಅಧಿಕಾರ ಪತ್ರ ನೀಡಿರುತ್ತಾರೆ. ಅದನ್ನು ಹಾಜರುಪಡಿಸಿರುತ್ತೇನೆ. ಅದನ್ನು ನಿಶಾನೆ ಡಿ-3 ಎಂದು ಗುರುತಿಸಲಾಗಿದೆ. ಸಾರಿಗೆ ಅಧಿಕಾರಿಗಳು ನೀಡಿರುವ "ಬಿ" ಎಕ್ಸ್‌ಟ್ರಾಕ್ಟ್‌ನ್ನು ಹಾಜರುಪಡಿಸಿದ್ದು ಅದನ್ನು ನಿಶಾನೆ ಡಿ-4 ಎಂದು ಗುರುತಿಸಿದೆ. ವಾಹನದ ನೊಂದಣಿ ಮಾಲೀಕರು ವಾಹನವನ್ನು ದುರುಪಯೋಗ ಮಾಡಿಕೊಂಡಿರುವುದರಿಂದ ವಾಹನವನ್ನು ತಮ್ಮ ಸ್ವಾಧೀನಕ್ಕೆ ಕೊಡಬೇಕೆಂದು ಈ ಪ್ರಾಧಿಕಾರದ ಮುಂದೆ ಅರ್ಜಿ ಸಲ್ಲಿಸಿರುತ್ತೇನೆ. ಸದ್ರಿ ವಾಹನಕ್ಕೆ ಸಂಬಂಧಿಸಿದ ಸಾಲವನ್ನು ಪೂರ್ತಿಯಾಗಿ ಸಂದಾಯ ಮಾಡಿಲ್ಲವೆಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರಾದ ಶ್ರೀ ಎಂ.ಎಸ್.ಎಸ್ ಇವರ ಪಾಟೀ ಸವಾಲಿಗೆ ಉತ್ತರಿಸುತ್ತಾ ನಮ್ಮ ಸಂಸ್ಥೆಗೆ ಸಂಬಂಧಿಸಿದ ಹಲವಾರು ಶಾಖೆಗಳಿರುತ್ತವೆ. ಮಂಗಳೂರು ವಿಭಾಗಕ್ಕೆ ಸೇರಿದ ಶಾಖೆಗಳನ್ನು ನಾನು ನೋಡಿಕೊಳ್ಳುತ್ತಿದ್ದೇನೆ. ಈ ವಾಹನಕ್ಕೆ ಸಾಲವನ್ನು ಮಂಜೂರು ಮಾಡಿದ್ದು ಹಾಗೂ ಲೀಸ್ ಒಪ್ಪಂದ ಮಾಡಿದ್ದು ಕಣ್ಣಾನೂರು ಶಾಖೆಯಿಂದ ಎಂದರೆ ಸರಿ. ಈ ಪ್ರಕರಣದಲ್ಲಿ ದಾಖಲೆ ಪತ್ರಗಳ ಆಧಾರದ ಮೇಲೆ ಸಾಕ್ಷಿ ನುಡಿಯುತ್ತಿದ್ದೇನೆ. ಲಾರಿಗೆ ಸಂಬಂಧಿಸಿದಂತೆ ಆಗಿರುವ ವ್ಯವಹಾರ ದಾಖಲೆ ಬಿಟ್ಟರೆ ನನಗೆ ಬೇರೆ ವೈಯಕ್ತಿಕ ಮಾಹಿತಿ ಇಲ್ಲ. ಈ ಲಾರಿಗೆ ಹಾಜರುಪಡಿಸಿದ ಆರ್.ಸಿ. ಪುಸ್ತಕದ ಪ್ರಕಾರ ಜೈಸನ್ ನೊಂದಣಿ ಮಾಲೀಕರಾಗಿರುತ್ತಾರೆ. ಇವರು ಸಾಲದ ಮರುಪಾವತಿಯನ್ನು ಸರಿಯಾಗಿ ಮಾಡಿಲ್ಲವೆಂದು ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ. ನಮ್ಮ ಸಂಸ್ಥೆಗೆ ಸಹಾಯ ಮಾಡಲು ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ತಿಳಿಸಿರುತ್ತಾರೆ.

ಮಾನ್ಯ ಎ.ಡಿ.ಪಿ. ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಲಾರಿಗೆ ಸಂಬಂಧಿಸಿದಂತೆ ನೊಂದಾವಣೆ ಮಾಲೀಕನು ಇದುವರೆಗೆ ಕಟ್ಟಬೇಕಾದ ಸಾಲದ ಕಂತನ್ನು ಮರುಪಾವತಿ ಮಾಡಿಲ್ಲವೆಂಬುದಕ್ಕೆ ಯಾವುದೇ ದಾಖಲೆ ಹಾಜರುಪಡಿಸಿರುವುದಿಲ್ಲ. ನಮ್ಮ ಸಂಸ್ಥೆಯು ಜೈಸನ್ ಕ್ಲೇವಿಯರ್‌ರೊಂದಿಗೆ ಮಾಡಿಕೊಂಡ ಒಪ್ಪಂದದಂತೆ ಸಾಲ ಮರುಪಾವತಿ ಮಾಡದೇ ಇದ್ದ ಪಕ್ಷ ಲಾರಿಯ ಸಂಪೂರ್ಣ ಹಕ್ಕು ನಮ್ಮಲ್ಲಿಯೇ ಇರುತ್ತದೆ ಎಂಬ ಕರಾರು ಇದೆ. ಒಪ್ಪಂದದಂತೆ ಸದ್ರಿ ಲಾರಿಯನ್ನು ಕಾನೂನುಬಾಹಿರ ಉದ್ದೇಶಕ್ಕಾಗಿ ಉಪಯೋಗಿಸಬಾರದು. ಆದರೆ ಸದ್ರಿ ವಾಹನವು ಪ್ರತಿ ದಿನ ಯಾವ ಕೆಲಸಕ್ಕಾಗಿ ಉಪಯೋಗವಾಗುತ್ತಿದೆ ಎಂದು ನಮಗೆ ಗೊತ್ತಿರುವುದಿಲ್ಲ. ಈ ಪ್ರಕರಣದಲ್ಲಿ ಲಾರಿಯನ್ನು ವಶಪಡಿಸಿಕೊಂಡ 2 ತಿಂಗಳ ನಂತರ ವಿಷಯ ಗೊತ್ತಾಯಿತು. ಈ ಲಾರಿ ವ್ಯವಹಾರವು ಕಣ್ಣಾನೂರು ಶಾಖೆಗೆ ಸಂಬಂಧಿಸಿದ್ದಿರುವುದರಿಂದ ಪತ್ರ ವ್ಯವಹಾರ ಮಾಡುವಲ್ಲಿ ವಿಳಂಬವಾಯಿತು. ದಿನಾಂಕ:21.11.2002 ರಂದು ಈ ವಾಹನವನ್ನು ಮದ್ಯಸಾರ ಸಾಗಾಟ ಮಾಡುವ ವಿಷಯ ನಮಗೆ ಗೊತ್ತಿತ್ತು. ಎಂದರೆ ಸರಿಯಲ್ಲ ಎಂದು ಸಾಕ್ಷಿ ಹೇಳಿಕೆ ನೀಡಿರುತ್ತಾರೆ.

ವಾಹನವನ್ನು ಅಕ್ರಮ ಮದ್ಯ ಸಾಗಣೆಗೆ ತನ್ನ ತಿಳುವಳಿಕೆಗೆ ಬಾರದೇ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಕರ್ತವ್ಯವಾಗಿದ್ದು ಈ ಪ್ರಕರಣದಲ್ಲಿ ವಾಹನದ ನೊಂದಣಿ ಮಾಲೀಕನು ತನ್ನ ತಿಳುವಳಿಕೆಯಿಂದಲೇ ತಾವೇ ಸ್ವತಃ ಈ ಅಕ್ರಮ ಮದ್ಯಸಾರ ಸಾಗಾಣಿಕೆಯಲ್ಲಿ ತೊಡಗಿರುವುದು ಸಾಬೀತಾಗಿರುತ್ತದೆ. ಅಭಿಯೋಜನೆ ಪರ ಪಡೆಯಲಾಗಿರುವ ಸಾಕ್ಷಿದಾರರ ಹೇಳಿಕೆಯಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:21.11.2002 ರಂದು ವಾಹನದ ನೊಂದಣಿ ಮಾಲೀಕರು ಅಕ್ರಮ ಮದ್ಯಸಾರದ ಸಾಗಣೆಯಲ್ಲಿ ಸ್ವತಃ ವಾಹನ ಚಾಲಕರಾಗಿದ್ದು ಸದ್ರಿಯವರನ್ನು ಸ್ಥಳ ಮಹಜರಿನ ಮೂಲಕ ದಸ್ತಗಿರಿ ಮಾಡಲಾಗಿರುತ್ತದೆ. ಈ ವಿಷಯವನ್ನು ಪ್ರಾಧಿಕಾರವು ನಂಬಲೇಬೇಕಾಗುತ್ತದೆ. ಆದರೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುವ ವಾಹನ ನೊಂದಣಿ ಮಾಲೀಕರು ತಾವು ದಿನಾಂಕ: 21.11.2002 ರಂದು ತಮ್ಮ ಮನೆಯಲ್ಲಿದ್ದು ಬೆಳಿಗ್ಗೆ 7.00 ಗಂಟೆಗೆ ತನ್ನ ಮನೆಯ ಹತ್ತಿರವಿರುವ ಜೋಸ್ ಎಂಬವರ ಅಂಗಡಿಗೆ, ಚಾಲಕರಾದ ರಾಜೇಶ್ ಇವರಿಂದ ದೂರವಾಣಿ ಕರೆ ಬಂದಿರುತ್ತದೆಂದು, ರಾಜೇಶ್ ಇವರು ಮಂಗಳೂರಿನಿಂದ 7.00 ಗಂಟೆಗೆ ದೂರವಾಣಿ ಮೂಲಕ ಮಾತನಾಡಿ ವಾಹನಕ್ಕೆ ಸಂಬಂಧಿಸಿದ ಒರಿಜಿನಲ್ ದಾಖಲೆ ಪತ್ರಗಳನ್ನು ತರಲು ತಿಳಿಸಿರುತ್ತಾರೆಂದು, ನಂತರ 7.30 ಕ್ಕೆ ತನ್ನ ಊರಿನಿಂದ ಹೊರಟು 12.00 ಗಂಟೆಗೆ ಮಂಗಳೂರಿನ ಗುಪ್ತವಾರ್ತಾದಳದ ಕಛೇರಿಗೆ ಬಂದಿರುವುದಾಗಿ ತಿಳಿಸುತ್ತಾ ವಾಹನದ ದಾಖಲೆಗಳನ್ನು ಕಛೇರಿಯಲ್ಲಿ ವಶಪಡಿಸಿಕೊಂಡಿರುವುದಾಗಿ ಸಾಕ್ಷಿ ನೀಡಿರುತ್ತಾರೆ. ಆದರೆ ವಾಸ್ತವವಾಗಿ ದಿನಾಂಕ: 21.11.02ರ ಬೆಳಿಗ್ಗೆ ಅಕ್ರಮ ಮದ್ಯಸಾರದ ಸಾಗಣೆಯ ಆರೋಪದ ಮೇಲೆ ವಾಹನದ ನೊಂದಣಿ ಮಾಲೀಕರಾದ ಜೈಸನ್ ಕ್ಲೇವಿಯರ್ಸ್ ಮತ್ತು ಆತನ ಸಹಾಯಕನಾದ ರಾಜೇಶ್ ಇವರನ್ನು ಬಂಧಿಸಿ ಅಕ್ರಮ ಮದ್ಯಸಾರದೊಂದಿಗೆ ವಾಹನ ಸಂಖ್ಯೆ: ಕೆಎಲ್-13 ಬಿ-8156ನ್ನು ಇಲಾಖೆಯ ವಶಕ್ಕೆ ಪಡೆದಿರುವುದು ದಾಖಲೆ ಪುರಾವೆಗಳಿಂದ ಸಾಬೀತಾಗಿದ್ದು, ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನೀಡಿರುವುದು ಕೇವಲ ಕಲ್ಪಿತ ಹೇಳಿಕೆ ಹಾಗೂ ಕಟ್ಟು ಕಥೆಯಾಗಿದೆ ಎಂದು ಪ್ರಾಧಿಕಾರವು ನಂಬಬೇಕಾಗುತ್ತದೆ. ಈ ಕಾರಣದಿಂದ ನೊಂದಣಿ ಮಾಲೀಕರ ತಿಳುವಳಿಕೆಯಿಂದ ವಾಹನವನ್ನು ಅಕ್ರಮ ಕೃತ್ಯಕ್ಕೆ ಉಪಯೋಗಿಸಿರುವುದು ನಿಸ್ಸಂಶಯವಾಗಿ ಸಾಬೀತಾಗಿರುತ್ತದೆ.

ಈ ಪ್ರಕರಣದಲ್ಲಿ ಜಪ್ತಿಗೊಳಿಸಲಾಗಿರುವ ವಾಹನದ ನೊಂದಣಿ ಮಾಲೀಕರಿಗೆ ಸಾಲವನ್ನು ನೀಡಿರುವ ಶ್ರೀರಾಮ್ ಇನ್‌ವೆಸ್ಟ್‌ಮೆಂಟ್ ಸಂಸ್ಥೆ ಪರ ಅರ್ಜಿದಾರರು ಸಲ್ಲಿಸಲಾಗಿರುವ ಅರ್ಜಿಯನ್ನು ಪರಿಶೀಲಿಸಲಾಗಿ ಸದರಿ ಸಂಸ್ಥೆಯು ವಾಹನದ ನೊಂದಣಿ ಮಾಲೀಕರೊಂದಿಗೆ ಹೈರ್ ಪರ್ಚೇಸ್ ಅಗ್ರಿಮೆಂಟ್ ಮಾಡಿಕೊಂಡಿರುವುದಾಗಿ ತಿಳಿದು ಬರುತ್ತದೆ. ಸದ್ರಿ ಒಪ್ಪಂದದಂತೆ ನೊಂದಣಿ ಮಾಲೀಕನು ಸಾಲದ ಮರುಪಾವತಿ ಮಾಡದೇ ಇರುವುದರಿಂದ ವಾಹನದ ಮಾಲೀಕತ್ವದ ಹಕ್ಕು ಇರುತ್ತದೆ ಎಂದು ಸಾಧಿಸಲು ಪ್ರಯತ್ನಿಸಿದೆ. ಈ ಕುರಿತು ಸಂಸ್ಥೆಯು ತನ್ನ ಪರವಾಗಿ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ್ದು, ಸದ್ರಿ ಸಾಕ್ಷಿಯನ್ನು ಡಿಡಬ್ಲ್ಯೂ ಎಂದು ಪರಿಗಣಿಸಿ ಸಾಕ್ಷಿಯ ಹೇಳಿಕೆಯನ್ನು ಪಡೆಯಲಾಗಿದೆ. ಈ ಸಾಕ್ಷಿಯು ತನ್ನ ಹೇಳಿಕೆಯಲ್ಲಿ ತಾನೇ ನಿಜವಾದ ವಾಹನದ ಮಾಲೀಕ. ತನಗೆ ತಿಳಿಯದಂತೆ ವಾಹನವನ್ನು ಅಕ್ರಮ ಸಾಗಣೆಗೆ ಉಪಯೋಗಿಸಲ್ಪಟ್ಟಿದೆ ಎಂದು ವಾಹನವನ್ನು ತಮಗೆ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ. ವಾಹನ ನೊಂದಣಿ ಮಾಲೀಕರು ಸಂಸ್ಥೆಯೊಂದಿಗೆ ಹೈರ್ ಪರ್ಚೆಸ್ ಒಪ್ಪಂದವನ್ನು ಮಾಡಿಕೊಂಡಿರುವುದು ಕಂಡು ಬರುತ್ತದೆ. ಸದ್ರಿ ಒಪ್ಪಂದದಂತೆ ನೊಂದಣಿ ಮಾಲೀಕನು ಪಡೆದಿರುವ ಸಾಲದ ಮರುಪಾವತಿಯ ಕಂತುಗಳನ್ನು ಪೂರ್ತಿಯಾಗಿ ಮಾಡುವವರೆಗೆ ವಾಹನದ ಮಾಲೀಕತ್ವದ ಹಕ್ಕು ಸಂಸ್ಥೆಗೆ ಸೇರಿದೆ ಎಂದು ಕಂಡು ಬರುತ್ತದೆ.

ಆದರೆ ಸದ್ರಿ ಸಂಸ್ಥೆಯು ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ಭಾಗಿಯಾಗದಂತೆ ಇರಲು ಯಾವುದೇ ಮುನ್ನೆಚ್ಚರಿಕೆಯನ್ನು ತೆಗೆದುಕೊಳ್ಳದಿರುವುದು ಕಂಡು ಬರುತ್ತದೆ. 1965ನೇ ಅಬಕಾರಿ ಕಾಯ್ದೆ ಕಲಂ 43 ಬಿ (2) ರಂತೆ ವಾಹನ ಮಾಲೀಕನಾಗಲೀ ಆತನ ಏಜೆಂಟಾಗಲೀ ಅಥವಾ ವಾಹನವನ್ನು ಸ್ವಾಧೀನ ಹೊಂದಿದವರಾಗಲಿ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ತಮ್ಮ ತಿಳುವಳಿಕೆಗೆ ಬಾರದೇ ಉಪಯೋಗಿಸಲ್ಪಟ್ಟಿದೆ ಮತ್ತು ಈ ಅಕ್ರಮ ಚಟುವಟಿಕೆಗೆ ವಾಹನವನ್ನು ಉಪಯೋಗಿಸದಂತೆ ಅವಶ್ಯವಿರುವ ಎಲ್ಲಾ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿರುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸಬೇಕಾಗಿದ್ದು, ವಾಹನ ಮಾಲೀಕರು ಈ ನಿಟ್ಟಿನಲ್ಲಿ ವಿಫಲರಾಗಿದ್ದಾರೆ. ನೊಂದಣಿ ಮಾಲೀಕರು ವಾಹನದ ಸ್ವಾಧೀನತೆಯನ್ನು ಹೊಂದಿದ್ದು ಸ್ವತಃ ಅವರೇ ಅಕ್ರಮ ಮದ್ಯಸಾರದ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದರಿಂದ ಪ್ರಕರಣದ 2ನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಕಾರಣಗಳಿಂದ ಹಾಗೂ ವಾಹನವನ್ನು ಅಕ್ರಮ ಸಾಗಣೆಯಲ್ಲಿ ತೊಡಗಿಸಿರುವುದು ರುಜುವಾತಾಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತಿಗೊಳಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂಬ ತೀರ್ಮಾನವನ್ನು ಪ್ರಾಧಿಕಾರವು ತೆಗೆದುಕೊಂಡು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:329:ಡಿಟಿಸಿಆರ್:2002-2003, ದಿನಾಂಕ: 10ನೇ ಜೂನ್ 2004**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43 (ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ನಂ.3, ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರುರವರ ಮೊಕದ್ದಮೆ ಸಂಖ್ಯೆ: 1/2002-03 ದಿನಾಂಕ: 21-11-2002ರಲ್ಲಿ ವಶಪಡಿಸಿಕೊಂಡಿರುವ ಲಾರಿ ಸಂ: ಕೆಎಲ್-13ಬಿ-8156ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 10-6-2004 ರಂದು ಶೀಘ್ರ ಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ-1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ :

ಪ್ರಾ.ಸಾ.:1 - ಶ್ರೀಮತಿ ಪ್ರೇಮ ಜಿ. ಉಡ್ಡಿಕರ್, ಅಬಕಾರಿ ನಿರೀಕ್ಷಕರು, ಹಂಪನಕಟ್ಟೆ ವಲಯ
ಪ್ರಾ.ಸಾ.:2 - ಶ್ರೀ ಚಂದ್ರಶೇಖರ, ಅಬಕಾರಿ ನಿರೀಕ್ಷಕರು, ಕೂಳೂರು ವಲಯ.
ಪ್ರಾ.ಸಾ.:3 - ರಮೇಶ್ ಅಮೀನ್, ಅಬಕಾರಿ ರಕ್ಷಕ, ಗುಪ್ತವಾರ್ತಾದಳ, ಮಂಗಳೂರು.

**ಅನುಬಂಧ-2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು :

ನಿಶಾನೆ ಪಿ-1 - ಪ್ರಥಮ ಮಾಹಿತಿ ವರದಿಯ ಪ್ರತಿ
ನಿಶಾನೆ ಪಿ-2 - ಮಹಜರು ಪ್ರತಿ
ನಿಶಾನೆ ಪಿ-3 - ಸೊತ್ತುಗಳ ಪಟ್ಟಿ
ನಿಶಾನೆ ಪಿ-4 - ರಾಸಾಯನಿಕ ತಜ್ಞರ ವರದಿ

**ಅನುಬಂಧ-3**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :

ಡಿ.ಡಬ್ಲ್ಯೂ-1 - ಜೈಸನ್ ಕ್ಲೇವಿಯರ್ (ಆರ್.ಸಿ. ಮಾಲೀಕ)
ಡಿ.ಡಬ್ಲ್ಯೂ-2 - ಜೋಸ್
ಡಿ.ಡಬ್ಲ್ಯೂ-3 - ಶ್ರೀ ಹರಿಕಿರಣ್ (ಶ್ರೀರಾಮ್ ಇನ್‌ವೆಸ್ಟ್‌ಮೆಂಟ್)

**ಅನುಬಂಧ-4**

ಶ್ರೀರಾಮ್ ಇನ್ ವೆಸ್ಟ್ ಮೆಂಟ್ ರವರು ಸಲ್ಲಿಸಿದ ದಾಖಲಾತಿಗಳು :

ನಿಶಾನೆ ಡಿ.ಡಬ್ಲ್ಯೂ-1 - ಒಪ್ಪಂದದ ಪ್ರತಿ
ನಿಶಾನೆ ಡಿ.ಡಬ್ಲ್ಯೂ-2 - ಆರ್.ಸಿ. ಛಾಯ ಪ್ರತಿ
ನಿಶಾನೆ ಡಿ.ಡಬ್ಲ್ಯೂ-3 - ಶ್ರೀರಾಮ್ ಇನ್‌ವೆಸ್ಟ್‌ಮೆಂಟ್‌ರವರು ನೀಡಿದ ಅಧಿಕಾರ ಪ್ರತಿ.
ನಿಶಾನೆ ಡಿ.ಡಬ್ಲ್ಯೂ-4 - ಸಾರಿಗೆ ಅಧಿಕಾರಿಗಳು ನೀಡಿದ "ಬಿ" ಎಕ್ಸ್‌ಟ್ರಾಕ್ಟ್‌ನ ಪ್ರತಿ.

**ಗೋವಿಂದಪ್ಪ**
ಪಿ.ಆರ್. 917
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.